ಕನ್ನಡ ಕಾವ್ಯಮಾಲೆ—೫೬

# ಭಾವತರಂಗ

ಎಂ. ಗೋಪಾಲಕೃಷ್ಣ ಅಡಿಗ



ಪ್ರಕಾಶಕರು
ಕಾವ್ಯಾಲಯ
ಮೈಸೂರು

# ಮುನ್ನುಡಿ

ನನ್ನ ತರುಣಮಿತ್ರರಾದ ಗೋಪಾಲಕೃಷ್ಣ ಅಡಿಗರ "ಭಾವ ತರಂಗ''ಕ್ಕೆ ಮುನ್ನುಡಿಯಾಗಿ ಅವರ ಅಪೇಕ್ಷೆಯಂತೆ ಎರಡು ಮಾತು ಗಳನ್ನು ಬರೆಯುತ್ತಲಿದ್ದೇನೆ. ನನ್ನನ್ನು ಅವರು ಒಬ್ಬ ಹಿರಿಯಮಿತ್ರ, ಗತದಶಕಗಳ ಕವಿ ಎಂದು ಮನ್ನಿಸುತ್ತಾರೆ; ಪ್ರೀತಿಸುತ್ತಾರೆ. ನನ್ನ ಮೆಚ್ಚಿಗೆಯ ಮಾತುಗಳು ತಮ್ಮ ಪ್ರಥಮ ಅಪತ್ಯದ ತಲೆಯ ಮೇಲಿರಲಿ ಎಂದು ಅವರು ಆಶಿಸುವುದು ತಾರುಣ್ಯದ ವಿನಯಕ್ಕೆ ಸಹಜವಾದದ್ದು. ಈ ನನ್ನ ಮೆಚ್ಚಿಗೆಯ ಮಾತಿನ ಜೊತೆಗೆ ಹೆಚ್ಚಿಗೆ ಎರಡುಮಾತು ಸೇರಿದರೆ ಅವು ವಿಮರ್ಶೆಯ ಎಚ್ಚರದ ಮಾತುಗಳೆಂದು ಕವಿಗಳೂ ಸಹೃದಯರೂ ಮನ್ನಿಸುವರೆಂದು ನಾನು ನಂಬಿದ್ದೇನೆ.

ಮೊದಲನೆಯ ಮಾತೆಂದರೆ ನಾನು ಕವಿತೆಗಳನ್ನು ಬರೆಯಲು ಪ್ರಾರಂಭಿಸಿದಾಗ ಇದ್ದ ಶೈಲಿಯ ಪ್ರಾಯೋಗಿಕತೆ ಇಂದಿನ ಕನ್ನಡದಲ್ಲಿ ಅಷ್ಟು ಮಟ್ಟಿಗೆ ಇಲ್ಲ. ಒಂದು ಬಗೆಯ ಸಿದ್ಧಶೈಲಿಯಿಂದ ನವಕವಿಗಳು ಹೊರಡುತ್ತಾರೆ. ಗೆಳೆಯ ಗೋಪಾಲಕೃಷ್ಣರಿಗೆ ಅವರ ವಯಸ್ಸಿಗಿದ್ದ ಶೈಲಿಯ ಪಾಕ ನನಗೆ ಆ ವಯಸ್ಸಿಗೆ ಇರಲಿಲ್ಲ. ಆದರೆ ನಮಗೆ ಆ ಕಾಲಕ್ಕೆ ಇದ್ದ ನಾವೀನ್ಯದ ಅನುಕೂಲ ಈಗಿನವರಿಗಿಲ್ಲ. ಹೀಗೆ ಅನು ಕೂಲ ಪ್ರತಿಕೂಲಗಳ ಬಂಡೆಗಳೊಳಗಿಂದ ಹಾಯ್ದು ಶ್ರೀ ಅಡಿಗರ ಭಾವತರಂಗಿಣಿ ಕನ್ನಡದ ಹೃದಯ ಸಮುದ್ರದತ್ತ ಹೊರಟಿದೆ. ಅಲ್ಲಿ ಅದಕ್ಕೆ ಸ್ವಾಗತವಿದೆ. ಅಡಿಗರು ವಿದ್ಯಾರ್ಥಿ ದೆಸೆಯಲ್ಲಿಯೇ ಶ್ರೀಯವರ ಪದಕವನ್ನು ದೊರಕಿಸಿದವರು. ಮುಖಪರಿಚಯವಿಲ್ಲದಿದ್ದರೂ ತಮ್ಮ ಕವನಗಳಿಂದಲೇ ಕನ್ನಡಜನದ ಪ್ರೀತಿಯನ್ನು ಹೊಂದಿದವರು. ಕಥೆ ಕಾದಂಬರಿಗಳಿಗಿರುವ ಪ್ರಕಟನಾಸೌಲಭ್ಯ ಕವನಸಂಗ್ರಹಗಳಿಗೆ ಇರು ವುದಿಲ್ಲ. "ಭಾವತರಂಗ"ವು ಇಷ್ಟು ಬೇಗ ಪ್ರಕಟನೆಗೆ ಅಣಿಯಾಗಿರು ವುದು ಜನರಲ್ಲಿ ಸಾಹಿತ್ಯಾಭಿರುಚಿ ಬೆಳೆದಿರುವ ಚಿಹ್ನೆಯೆಂದೇ ನಾನು ಭಾವಿಸುತ್ತೇನೆ.

"ಅನ್ಯರೊರೆದುದನೆ ಬರೆದುದನೆ ನಾ ಬರೆಬರೆದು ಬಿನ್ನಗಾಗಿದೆ ಮನವು'' ಎಂದು ಅವರು ಕೊರಗುವ ಕಾರಣವಿಲ್ಲ. ವರ್ಧಿಷ್ಣುವಾದ

ಸವಿಮರ್ಶಕ ಕಾವ್ಯನಿರ್ಮಾಣೋತ್ಸಾಹದಲ್ಲಿ ಹಳೆಯದನ್ನು ಚೆಲ್ಲಿ ಹೊಸದನ್ನು ಚಿಗುರಿಸುವ ಋತುವೈಭವವಿರುತ್ತದೆ. ಅಡಿಗರ ನುಡಿಯಲ್ಲಿ ಕೆಚ್ಚಿದೆ; ಲಾಲಿತ್ಯವಿದೆ. ವಿಧಿಗೆ ಇದಿರಾಗುವ ಅನಿರ್ವಿಣ್ಣ ಉತ್ಸಾಹವಿದೆ. ಹೊಸ ಬಾಳಿನ ಅನಂತಕ್ಷಿತಿಜ ಅವರ ಕಣ್ಣಿನ ಕದಿರಿಗೆ ದುರ್ಬೀನಿನ ಹರಿತವನ್ನು ಕೊಟ್ಟಿದೆ. ಆದರಿಂದ ಅವರ ಏಳು ಬೀಳಿನ ತೇಂಕಾಟ ಇಂದಿನ ಜೀವನದ ಛಂದವಾಗಿ ಅಂದವಾಗಿ ಸಹೃದಯರಿಗೆ ಉತ್ಸುಕತೆಯನ್ನೂ ಉತ್ಸಾಹವನ್ನೂ ಸಮಾನವಾಗಿ ಕೊಡುವುದು. ತನ್ನ ಭಾವಕ್ಕೆ ನಾಡಿನ ನುಡಿಯ ತೊಡಿಗೆಯನ್ನು ಇಡುವಾಗ ಯಾವ ಕವಿಯೂ ತನ್ನ ಭಾವದ ಹಾಸಿಗೆ ಜನಜೀವನದ ಹೊಕ್ಕನ್ನು ಸೇರಿಸದೆ ನಿರ್ವಾಹವಿಲ್ಲದಾಗುವುದು. ಅಂಚು ಸೆರಗು ತನ್ನದಾದರೆ ವೈ ಎಲ್ಲರದಾಗಿ ಬಿಡುತ್ತದೆ. ಕವಿಹೃದಯದೊಡನೆ ಒಂದಾಗುವುದಕ್ಕೆ ಇಲ್ಲಿಯೇ ಹಾದಿ. ಕವಿ ಗೆಳೆಯನನ್ನೇ ಕುರಿತು ಬರೆಯಲಿ, ಗೆಳತಿಯನ್ನೇ ಕುರಿತು ಬರೆಯಲಿ, ನಾಡಿನ ನಾಡಿಯನ್ನೇ ಮಿಡಿಯಲಿ, ತನ್ನ ಏಕತಾರಿಯನ್ನೇ ಬಾರಿಸಲಿ, ಜನರನ್ನು ತನ್ನೆದೆಯಲ್ಲಿ ಎಳೆದುಕೊಂಡು ಅವರೆದೆಯನ್ನು ಸೇರುತ್ತಾನೆ. ವಿಶ್ವಯುದ್ಧದ ದಾಹ, ಶಾಂತಿ; ಆಗಸ್ಟ್ ಒಂಭತ್ತರ ವೀರ, ಕರುಣೆ; ಇವುಗಳಂತೆಯೇ ಕವಿಯ ವೈಯಕ್ತಿಕ ಬಿಡುಗಡೆಯಲ್ಲಿಯೂ ಅವನ ದಿಙ್ಮೂಢ ವೃತ್ತಿಯಲ್ಲಿಯೂ ಒಂದು ವಿಮೋಚನೆಯ ಬಂಧದ ಭಾವ ಎದೆಯನ್ನು ತಟ್ಟುತ್ತದೆ. ಅವರ ವಾಣಿ ಅಲ್ಲಲ್ಲಿ ಪ್ರೌಢವಾಗಿದೆ.

ಶ್ರೀ ಅಡಿಗರು ಈವರೆಗೆ ಬಹಳ ಬರೆದಿರುವರಾದರೂ ಹೊಸನೀರು ಇನ್ನೂ ಅವರನ್ನು ಹೊಗುತ್ತಲೇ ಇದೆ. ಅವರ ಕಾವ್ಯವಾಹಿನಿ ತನ್ನ ರಭಸದಂತೆ ತನ್ನ ಪ್ರಶಾಂತಿಯನ್ನೂ ನಾಡಿಗೆ ನೀಡಿ ಧನ್ಯತೆಯನ್ನು ಪಡೆಯಲಿ. ಇಂದಿನ ಕನ್ನಡ ನುಡಿಯ ಕಾಂತಿ ಮಾಧುರ್ಯ ಓಜಸ್ಸುಗಳನ್ನು ಬೆಳೆಸುವ ನವಕವಿಗಳಲ್ಲಿ ನಿಸ್ಸಂಶಯವಾಗಿ ಅಡಿಗರ ಕೌಶಲದ ಉಡುಗರೆಯಿದೆ. ಅವರ ಗೀತಗಳು ಕೆಲವು ಮೂಕ ಹೃದಯಗಳಿಗೆ ಕಲಕಂಠಗಳನ್ನೂ ಸುಕುಮಾರ ಹೃದಯಗಳಿಗೆ ಒಂದು ಭರವಸೆಯನ್ನೂ ಕೊಡುವುವೆಂದು ನಾನು ಹೇಳಬಲ್ಲೆ.

ಸೊಲ್ಲಾಪುರ,

ನೀಲಾನಗರ, **ದ. ರಾ. ಬೇಂದ್ರೆ.**

೨೪-೧-೪೬

# ಪರಿವಿಡಿ

# ಬಿನ್ನಹ

ಕಳೆದ ಹನ್ನೆರಡು ಹದಿಮೂರು ವರ್ಷಗಳಿಂದಲೂ ನಾನು ಆಗಾಗ ಕವನಗಳನ್ನು ಬರೆಯುತ್ತ ಬಂದಿದ್ದೇನೆ. ಅವುಗಳಲ್ಲಿ ಹಲವು ಆಗಲೇ ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿಯೂ ಇವೆ. ಆದರೆ ನನ್ನ ಕವನಗಳನ್ನೆಲ್ಲ ಏಕತ್ರ ಸಂಗ್ರಹಿಸಿ ಗ್ರಂಥರೂಪವಾಗಿ ಪ್ರಕಟಿಸುವುದು ಅವಶ್ಯವಾಗಿತ್ತು. ಇಂದು ಅದು ಸಾಧ್ಯವಾಗಿದೆ. ನಾನು ಈವರೆಗೆ ಬರೆದಿರುವ ಎಲ್ಲ ಕವನಗಳಲ್ಲವಾದರೂ ಅವುಗಳಲ್ಲಿ ಹೆಚ್ಚಿನವು ಇಲ್ಲಿ ಬಂದಿವೆ. ೧೯೩೪ ರಿಂದ ೧೯೪೫ರ ಕೊನೆಯತನಕವೂ ಬರೆದ ಈ ಕವನಗಳಲ್ಲಿ ಮೊದಲನೆಯ ಮತ್ತು ಕೊನೆಯ ಎರಡು ಪದ್ಯಗಳನ್ನು ಬಿಟ್ಟು ಉಳಿದವುಗಳನ್ನು ಅವುಗಳನ್ನು ಬರೆದ ಕಾಲಕ್ಕೆ ಅನುಕ್ರಮವಾಗಿ ಇಲ್ಲಿ ಸಂಕಲಿಸಿದೆ. ಈ ಕವನಗಳನ್ನು ಓದಿದ, ಓದಿಸಿ ಕೇಳಿದ ಹಲವರು ಇವುಗಳನ್ನು ಮೆಚ್ಚಿದ್ದಾರೆ; ಮೆಚ್ಚಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದ್ದಾರೆ. ಆದರೆ ಇಂದು ನಾನು ನನ್ನ ಈ ಕವನಗಳನ್ನು ಕನ್ನಡ ಜನತೆಗೆ ಅರ್ಪಿಸುತ್ತಲಿದ್ದೇನೆ; ಸಹೃದಯರ ವಿಮರ್ಶೆಗೆ ಒಪ್ಪಿಸುತ್ತಿದ್ದೇನೆ. ಕಾಲ ಇವುಗಳನ್ನು ತನ್ನ ಒರೆಗಲ್ಲಿಗಿಟ್ಟು ನೋಡಲಿದೆ; ರಸಿಕ ಲೋಕ ಇವುಗಳನ್ನು ತೂಗಿನೋಡಿ ಇವುಗಳ ಬೆಲೆಯನ್ನು ನಿರ್ಧರಿಸಲಿದೆ. ಆದುದರಿಂದ ಈ ಕವನಗಳ ವಿಷಯವಾಗಿ ನಾನು ಹೇಳಬೇಕಾದುದು ಹೆಚ್ಚಿಗೆ ಏನೂ ಇಲ್ಲ.

ನನಗೆ ಹಿರಿಯರೂ ಪೂಜ್ಯರೂ ಆದ ಕವಿಚಕ್ರವರ್ತಿ ಬೇಂದ್ರೆಯವರು ಈ ಕವನ ಸಂಕಲನಕ್ಕೆ ಮುನ್ನುಡಿಯನ್ನು ಬರೆದು ಹರಸಿದ್ದಾರೆ. ಅವರು ನನ್ನಲ್ಲಿ ತೋರುತ್ತ ಬಂದಿರುವ ಪ್ರೀತಿವಾತ್ಸಲ್ಯಗಳು ನನ್ನ ಪುಣ್ಯದ ಫಲ ಎಂದು ನಾನು ತಿಳಿಯುತ್ತೇನೆ. ಅವರ ಬಗೆಗೆ ನನ್ನಲ್ಲಿರುವ ಗೌರವಾದರಗಳನ್ನು ಮಾತುಗಳಲ್ಲಿ ರೂಪುಗೊಳಿಸಲು ಸಾಧ್ಯವಿಲ್ಲ.

ಈ ಸಂಕಲನದಲ್ಲಿರುವ ಕೆಲವು ಕವನಗಳಾದರೂ ಸಹೃದಯರ ಹೃದಯವನ್ನು ಮುಟ್ಟಿದರೆ ಧನ್ಯನೆಂದು ಭಾವಿಸುತ್ತೇನೆ.

ಮೈಸೂರು,

೨೦–೯–೪೭ ಎಂ. ಗೋಪಾಲಕೃಷ್ಣ ಅಡಿಗ

# ಭಾವತರಂಗ

## ನನ್ನ ನುಡಿ

ಹಲವು ಹೂಗಳ ಸುಗಂಧವ ತರುವ ಹರಿಕಾರ,
ಎಲೆಲೆ ಮಂದಾನಿಲನೆ! ನಿನಗೆ ಸೌರಭಸಾರ
ದೊರೆಕೊಳ್ಳಲಿಲ್ಲ; ಹಲವಾರು ನಕ್ಷತ್ರಗಳ
ಸೆರೆಹಿಡಿದು ತಂದುಕೂಡುವ ದೀಪ್ತಕಾಸಾರ!
ನಿನಗಿಲ್ಲ, ನಿನಗಿಲ್ಲ ಬಾಳ ಬೆಳಗುವ ದೀಪ;
ಹಲವು ಬಣ್ಣವ ತಳೆದು ಮೆರೆವ ಸಂಧ್ಯಾಮೇಘ!
ನಿನಗಿಲ್ಲ, ನಿನಗಿಲ್ಲವಣ್ಣ, ಮಿಾಸಲುಬಣ್ಣ!
ಚಂದ್ರಸೂರ್ಯರ ನೆರವಿನಿಂದೆ ಬೆಳಗುವಳೇ ವ-
ಸುಂಧರೆಗದೆಂದು ಬಹುದೋ ಸ್ವಯಂದೀಪಕತೆ!
ಅವರಿವರ ನುಡಿಗಳನು ಕದ್ದು ಮರುನುಡಿಗೊಡುವ
ದೆಸೆಗಳೇ, ನಿಮಗೆಂದು ಬಹುದು, ಮಿಾಸಲು ನಿನದ?

ಅನ್ಯರೊರೆದುದನೆ, ಬರೆದುದನೆ ನಾ ಬರೆಬರೆದು
ಬಿನ್ನಗಾಗಿದೆ ಮನವು; ಬಗೆಯೊಳಗನೇ ತೆರೆದು
ನನ್ನ ನುಡಿಯೊಳೆ ಬಣ್ಣ ಬಣ್ಣದಲಿ ಬಣ್ಣಿಸುವ
ಪನ್ನತಿಕೆ ಬರುವನಕ ನನ್ನ ಬಾಳಿದು ನರಕ!

# ಬಯಕೆ

ಅಂದು ರಸಋಷಿಗಳೆನಿಬರೊ ಬರೆದ ಕಾವ್ಯರಸ
ಸಿಂಧುವಿನೊಳಿದೆ ಮಿಂದು ಮಿರುಗುಗೊಳಲಿ;
ಅಂದಿನವರಾಂತರ್ಯದೊಂದು ಶಾಂತಿಯು ಕಾಂತಿ
ಇಂದೆಮ್ಮ ಕೃತಿಗಳಲಿ ಮಾರ್ಪೊಳೆಯಲಿ!

ಹಳೆತನದ ಪೊರೆಯೊಳಿದೆದುಂಬಿ ತಪಮಿರ್ದು ಸೂ
ಜ್ವಳಮಾಗಿ ಹೊರಬಂದು ಗರಿಹೊಡೆಯಲಿ;
ಬಳಿಕ ಹೊಸತನದ ಮೃದುಗಂಭೀರಝುಂಕಾರ
ಇಳೆಯಗಲವನು ಮಿಡಿದು ಮೊಳಗುತಿರಲಿ!

ಚಿರಯುವತಿ ಪ್ರಕೃತಿ; ಅವಳಮರಸೌಂದರ್ಯರಸ
ದೊರತೆಯನು ಕುಡಿದು ಬಗೆ ತುಂಬುತಿರಲಿ;
ಸರಸಕವಿತೆಯ ಬಿಂದುಬಿಂದುಗಳ ಹೊರಗೆಡಹಿ
ತಿರೆಗೆ ಸಂತಸದೊಸಗೆಯನು ಸಾರಲಿ!

ಮನುಜನೆದೆಯೊಳು ಮಲೆತು ಮೊರೆದೆಸೆವ ಪಶುವ ಗ
ರ್ಜನೆ ನನ್ನ ಕೃತಿಗಳಲಿ ಮಸಗದಿರಲಿ;
ಮನುಜನೊಳಗಿನ ದೈವಿಕತೆಯ ಕಿಡಿಯುಂ ಸ್ಫುರಿಸ
ಲನುವಾಗಿ ಬಾಳ್ವೆಯಿದು ಸವೆಯುತಿರಲಿ!

ಶರನಿಧಿಯು ಗುಣ್ಪು ಬಾಂದಳದ ಪೆಂಪರಳುಗಳ
ನರುಗಂಪು ತಣ್ಣೆಲರ ತಂಪು ಕೂಡಿ
ಚಿರಮಾಗಿ ಬಗೆಯುರಸನುಸಿರ ಸೋಂಕಿಗೆ ಬೀಗಿ
ಮೆರೆಯಲಿದೆ ಮೈಮರೆದು ಹಾಡಿ, ಹಾಡಿ!

# ಹಕ್ಕಿ

ತಡೆಯಿಲ್ಲ, ಬಡೆಯಿಲ್ಲ; ಕಟ್ಟುಮೆಟ್ಟುಗಳ ಜಂ
ಜಡಮಿಲ್ಲಮಾಮೋದಮಧುರಸದೆ ವಿಷವ ಸಂ
ಗಡಿಪ ವೈಕಲ್ಪ್ಯದುಗ್ಗಡಮಿಲ್ಲಮಿರವಿನೆಳಲತೆಯ ಕುಡಿಯುಂ ಕಡಿಯಿಪ
ಕಡುದುಗುಡದಿರಮಿಲ್ಲಮೆತ್ತಲುಮಲಂಪು ಬಂ
ದಡಸಿಹುದು ವಿಶ್ವತೋಮುಖಮಾಗಿ; ನಿಶ್ಚಿಂತೆ
ವಡೆದು ಸೊಗವಾಳ್ತಿ ಸವಿಯುಂ ಸವಿವ ಹಕ್ಕಿಗಳ ಜೀವನಮದೆಂತು ಸವಿಯೋ!

ಇಲ್ಲಿ ಹಕ್ಕಿಗಳ ಸಮಧುರಜೀವನದ ಕಡಲಿ
ನಲ್ಲಿ ಸುಳಿವಾಮೋದಮಾರುತನ ತೀಟದಿಂ
ಫುಲ್ಲವಿಸಿ ಘೂರ್ಣಿಪೀ ಸಂತೋಷಶೀತಲಚಲತ್ತರಂಗಾವಳಿಯೊಳು
ಸೊಲ್ಲಿಪುದನಾರತಮನಂತಮಾದೊಂದು ಕೈ
ವಲ್ಯ ಸುಖಸಂಗೀತಸಾರಮುದರಿಂದೆ ಮನ
ಮಲ್ಲಿಗೆಳಸುವುದವಿಚ್ಛಿನ್ನಮಾದಾನಂದಮಧುರಸಮನೊಲ್ಲರಾರು ?

ಅರಸಾಳೆನಿಪ್ಪ ಪರಿಭೇದವಿರಹಿತಮಾದ
ಸುರುಚಿರಾಂಬರಸುಮಧುರಾನಿಲವ್ಯಾಪ್ತಿಯೊಳು
ಚರಿಸಿ ವಿಹರಿಸಿ ಕೆಲದ ಮರದಿನಿನಿವಣ್ಗಳಂ ತಿಂದು ಸ್ವಚ್ಛಂದಮಾಗಿ
ನಿರುತಂ ಮನೋಜ್ಞತರಮಾದಿಂಚರಂ ಗೆಯ್ದು
ಹರುಷಗಡಲಲೆಗಳೊಳ್ ಮನವಾರೆ ಮಿಂದು ಕಂ
ದರಮಧುರಮೇಲನದೆ ಕಲೆತು ಮೆರೆವಾ ಜೀವನಂ ವಾಂಛನೀಯಮಲ್ತೇ ?

ಎದೆಯ ದನಿಯಾಣತಿಯನಾಂತು ಕಾರ್ಯಮನೆಸಗ
ಲಿದರೊಳೇಂ ಪ್ರತಿಬಂಧಮಿಲ್ಲವಿಾಮಧುರಜೀ
ವದನಂತಗೀತಾಮೃತವನುಂಡು ಮತ್ಸರಂದಳೆವ ಕಿಡುಗೆಯ್ತಮಿಲ್ಲ.
ಬದುಕುಹೋರಾಟಗೀರಾಟಗಳ ಕುರುಪಿಲ್ಲ
ದೊದವಿದನಿತಂ ಮೆದ್ದು ನರರ ಸೊಗವಂ ಕದ್ದು
ಹೃದಯದೊಳಗಳವಡಿಸಿ ತೋಷಮಂ ಪುಟವುದಿದೆ ಹಕ್ಕಿಗಳ ಬಾಳ ತಿರುಳು.

ದೇವ ! ಎನಗೀ ಶ್ರೇಷ್ಠಮೆನಿಪ ನರಜನ್ಮಮೆಂ
ಬೀ ವಿಧದನಂತದುಃಖಾಕರಂ ತರಮಲ್ತು ;
ಸಾವು ಸಮನಿಸಲೆನಗೆ ಸತ್ವರಂ; ಬಳಿಕೀವುದೈ ಪಕ್ಷಿಜೀವಿತವನು.
ಸಾವನ್ನೆಗಂ ಸ್ವತಂತ್ರದೆ ನಲಿದು ನಿರ್ವೈರ
ಭಾವದಿಂ ಮೆರೆದು ಜೀವನತಂತ್ರಿಯಂ ಮಿಡಿಯು
ತಾವಗಂ ಕಳೆಗೊಳಿಸಿ ನೆಲೆಗೊಳಿಪೆನೊಂದು ಮಂಜುಳವಾದ ಗೀತಿಕೆಯನು

ಹಕ್ಕಿವಾಳ್ದಳಿದಾನನಾರತಂ ಪಾರುತ್ತು
ಮಕ್ಕರೆಯಃ ಸವಿ ಹಾಡನುಲಿದು ಗರಿಗೆದರಿ ಬಂ
ದಿಕ್ಕುವೆಂ ಶೀರ್ಷವಂ ತವಚರಣಸರಸಿಜದ ಮಧ್ಯಪ್ರದೇಶದಲ್ಲಿ ;
ಬಿಕ್ಕುವೆಂ, ಬೇಡುವೆಂ ; ದಯದಿಂದಮಂದು ನೀಂ
ತಕ್ಕೈಸಲಾರೆಯಾ, ದೊರೆಯೆ ? ಅಂದೆನಗಖಿಳ
ದುಃಖಂಗಳಿಂ ಮುಕ್ತಿ ಸಿಕ್ಕದಿರ್ಪುದೆ ಭರದೆ, ಶರಣನರಪಾಮರಂಗೆ !

# ಅಳಿಯಲಾರದ ನೆನಹು

ಅಳಿಯಲಾರದ ನೆನಹು ಜೀವಜೀವಾಳದಲಿ
ಬಲವಾಗಿ ಬೇರೂರಿ ನಿಂದು
ಗಳಿಗೆಗಳಿಗೆಗೆ ಬಾಳುವೆಯ ದಾರಿಯನು ತಡೆದು
ಸೆಳೆದಪುದು ಭೂತದೆಡೆಗಿಂದು.

ಕಳೆದ ಬಾಳುವೆಯ ನಲ್ಗನಸಿದೋ ಜೀವನದ
ಹೊಳೆಯ ಮೊದಲಿಂ ತುದಿಯುವರೆಗೂ
ಅಲೆಯಾಗಿ, ಸುಳಿಯಾಗಿ, ಸುಳಿವ ಮೆಲ್ಲೆಲರಾಗಿ
ಬಳಸಿಹುದು ಬಹುರೂಹುವಡೆದು !

ಭಾವವೀಣೆಯ ತಂತಿಯನು ಮಿಾಂಟಿದೊಡೆ ಕಳೆದ
ಜೀವನವೆ ಬಹುರಾಗಗೊಂಡು
ತೀವಿ ಹರಿವುದು, ಮನವನಳಲಿಪುದು, ನಲಿಯಿಪುದು,
ಆವುದೋ ನವರಸದಿ ನಾಂದು.

ಸುಖದುಃಖಗಳ ರಾಗಭೋಗಗಳ ನೇಹಗಳ
ಸಕಲಾನುಭಾವಗಳು ಕರಗಿ,
ಕರಗಿ ಸಮರಸವಾಗಿ ಬಂದೆದೆಯ ಕಂದರದಿ
ಮೊರೆಯುತಿಹುವೊಂದೆ ತಾನದಲಿ !

ಎನಿತೆನಿತೊ ಹಗಲಿರುಳು ಸವೆದ ಕಿರುದಾರಿಯಲಿ
ನೆನಹೆಂಬ ಕಿರುಸೊಡರ ಹಿಡಿದು
ಮನದ ಮಂದಿರಕಳಿದ ಬಾಳುವೆಯ ಚಿರವಿನೂ-
ತನ ಚಿತ್ರಗಳು ಧೀಂಕಿಡುವುವು !

ಸಂಜೆಯಾಗಸದ ನವರಾಗರಂಜಿತಮೇಘ
ಪುಂಜದಂತಿವು ಚಣಕೆ ಚಣಕೆ
-ಒಂದೊಂದು ರೂಪದಲಿ, ಒಂದೊಂದು ರಾಗದಲಿ
ಬಂದು ಸೋಂಕುವುವೆದೆಯ ತಳಕೆ !

ಮುಂದುಮುಂದಕೆ ಹಾರಲಾರದೆನ್ನೆದೆದುಂಬಿ
ಹಿಂದುಹಿಂದಕೆ ಹಾರುತಿಹುದು ;
ಹಿಂದಿನಿರವಿನ ಬಾಡಿಬಿದ್ದ ಹೂವಿನ ಕೆಲದಿ
ನಿಂದು ನಿರುಕಿಸಿ ಚೀರುತಿಹುದು !

ಎಳಹರೆಯವೆಂಬ ಸಂತಸದ ಹೊನಲಡಗುತಿರೆ
ಆಳಿಜವ್ವನದ ಮರುವಿನೊಳಗೆ,
ಕಡೆಯುಡುಗಿ ಹಡಿಲಾಗಿ ಬಗೆ ಅಳಲ ಮಡಿಲಾಗಿ
ತಳರುತಿದೆ ಮೃತ್ಯುವಿನ ತಡಿಗೆ.

# ವಿಧಿಗೆ

ವಿಧಿಯೆ! ನಿನ್ನಿದಿರು ನೂರಾಂತು ಹೋರಾಡಿ ಕೆ-
ಚ್ಚೆದೆತನದ ಬಲ್ಮೆಯನು ಬಿತ್ತರಿಪೆನು ;
ಪದವನಿಡುತೆನ್ನೆದೆಯ ಮೇಲೆ ತಾಂಡವವೆಸಗು!
ಬೆದರುವೆನೆ? ಬೆಚ್ಚುವೆನೆ? ನಿನಗೆ ;—ನಾನು!

ಬಾಳುವೆಯ ಹಂದರಲಿ ಹೊಂಗನಸುಗಳ ಹೆಣೆದು
ತೇಲಾಡುತಿರೆ ಗಾಳಿಯಂತೆ ಮನವು,
ದಾಳಿಯಿಟ್ಟೆಲ್ಲವನು ಹಾಳುಮಾಡಿದೆ. ನಿನ್ನ
ಮೇಲೆ ಕೆರಳದೆ ನನ್ನ ಗಂಡುತನವು?

ಬಿರುಗಾಳಿಯಂತೆನ್ನ ಬಾಳ್ವೆದೋಣಿಯನು ಗಿರ
ಗಿರನೆ ತಿರುಗಿಸು ಭವಾಂಬುಧಿಮಧ್ಯದಿ:
ಉರಿವುರಿವ ದಾವಾಗ್ನಿಯಂತೆನ್ನ ಹಿರಿಯಾಸೆ
ತರಗೆಲೆಗಳಂ ಸುಟ್ಟು ಬೂದಿಗೊಳಿಸು!

ಸೋಲುಗಳ ಕೋಲುಗಳನೆಸೆದೆನ್ನ ಬಾಳುವೆಯ
ಸೀಳು; ಹೋಳೆನ್ನೊಡಲ ಹಲವು ಬಾರಿ!
ದಾಳಿಡುವ ನಿನಗೆ ಶರಣೆನದೆ ಬೀಳ್ಗಳೆದು ಮೇ
ಲ್ಬೀಳುವೆನು, ವೀರನಿಗದೊಂದೆ ದಾರಿ!

ಹುಟ್ಟುಸಾವಿನ ಸೋಲುಗೆಲುವಿನೊಡೆತನ ನಿನ್ನ
ಕಟ್ಟಿಗೊಳಗಾದೊಡೇನಯ್ಯ? ಹೇಳು!
ಹುಟ್ಟುಸಾವುಗಳ ಸೀಮೆಯ ಮೀರಿ ನಿಂತ ಜಗ
ಜಟ್ಟಿಯೈ, ಆತ್ಮಸ್ವರೂಪಿ ನಾನು!

ಉಸಿರಿರುವ ವರೆಗೆ ನಿನ್ನೊಡನೆ ಕಾದಾಡುವೆನು ;
ಬಸವಳಿದೊಡೆದ್ದು ಮಸಗುವೆನು ತಿರುಗಿ!
ಉಸಿರಿಡುವ ಹೆಣವಾಗಿ ಬಾಳುವೆನೆ? ಚಲದ ಮೈ
ಮಸಕವಂ ಮರೆಯದೆಯೆ ಹಿಂದೆ ಜರುಗಿ!

ತಿರುತಿರುಗಿ ಹುಟ್ಟುಸಾವುಗಳಿಂಗೆ ಜಿಗಿದು ಬಾಂ
ಬರಮುಳುರಿ ಬಂದಿನನನಿಕ್ಕಿ ತಿರೆಗೆ
ಉರುಳುವಂಬುದದಂತೆ ಸೋ೦ಲಿನಿಂದೆದೆಗೆಡದೆ
ತಿರುತಿರುಗಿ ಬಂದು ನಿಂದಪೆನು ಧುರಕೆ !

ಕೊಲುವೆಯಾದೊಡೆ ಕೊಲಿಸಿಕೊಳುವೆ ; ಯಾತನೆಗೊಳಿಸಿ
ನಲಿವೆಯಾದೊಡೆ ನಗಿಸಿಕೊಂಬೆನೆಂಬ
ಬಲುಹೆನ್ನೊಳಿರಲು ತಲೆವಾಗುವೆನೆ ನಿನಗೆ ? ನಿ
ಶ್ಚಲನಿಶ್ಚಯವೆ ತಾನೆ ಸಿರಿ ಬೀ೦ರದ !

ಎಲೆಲೆ ವಿಧಿ ! ನೋ೦ಡಿಲ್ಲಿ ನಿಂತಿರುವೆನೆದೆಸೆಟೆದು ;
ನಿನಗೆ ಧುರವೀ೦ಳ್ಯವಂ ಕೊಡುವೆನಿದೆಕೋ೦ !
ಸೆಣಸು, ಹೋ೦ರಾಡೆನ್ನ ಕುನಿಸು ; ತೊತ್ತಳದುಳಿದು
ಕೊನೆಗಲ್ಪತನುವಿದಂ ನೀ೦ಂ ಕಳಚಿಕೋ೦ !

# ದೀಪಾವಳಿ

ಇದೊ ಬಂತು ದೀಪಾವಳಿಯ ಹಬ್ಬವಿಂದು ; ಹ
ಬ್ಬಿದೆ ನಾಡೊಳುತ್ಸವಂ ; ದೀಪಾಳಿ ಬೆಳಗಿ ತೊಳ
ಗಿದೆ ದಿಗ್ದಿಗಂತವಂ; ಚಿದರುತಿದೆ ತಿಮಿರವಗ್ಗಳಿಸುತಿದೆ ಜಗದ ಸೊಬಗು.
ಮುದವಲ್ಲಿ ಮುದವಿಲ್ಲಿ ತುಂಬಿತುಳುಕಿದೆ; ನಾಡಿ
ನೆದೆಯೊಳಾವುದೊ ನವ್ಯತೇಜವಮುಗ್ಗಡಿಸುವಂ–
ತಿದೆ ಹಾಸಪರಿಹಾಸವಿಭ್ರಮವಿಲಾಸಂಗಳಿಂದೊಸಗೆ ಮಸಗುತಿರಲು.

ಇಂದದೇನೊಸಗೆ ಕನ್ನಡಕೆ ? ಕನ್ನಡತಾಯ
ಬಂಧನಂ ಕಳೆದುದೇ ? ಶೋಕವಡಗಿತೆ ? ನಾಡ
ನೊಂದಿರ್ದ ಘೋರತಿಮಿರಂ ತೊಲಗಿತೇ ? ನವ್ಯಜೀವನಂ ಸ್ಫುರಿಸುತಿಹುದೇ ?
ಒಂದಾಗಿ ಕನ್ನಡರು ನಿಂದರೇ ? ನಿಂದು ತರಿ
ಸಂದು ತಮ್ಮುದ್ಧಾರಕಾಗಿ ಹೋರಾಡುವರೆ ?
ಹಂದೆಗಳ ತೆರದೊಳನಿತೊಂದನೆಸಗದೆ ವೃಥಾ ನಕ್ಕು ನಗೆಗೀಡಾಗರೇ ?

ಒಂದಿರುಳಿನೊಸಗೆಯಿದು ; ಬರಿಯ ಕಣ್ಮನಗಳಿಗೆ
ಹೊಂದಿ ಮರೆಯಾಗುವಾನಂದವಿದು ; ಜೀವನದ
ಸಿಂಧುವಿನ ಮೇಲ್ಮೈಯ್ಯೊಳೊಗೆವ ತೆರೆ; ಮಿಂಚಿಮರೆಯಾಗುತಿರುವೊಂದು ಕನಸು.
ಇಂದೆಮ್ಮ ಬಾಳು ಕಳ್ತಲೆಯ ಬಿಣ್ಪೊರೆಗೆ ಕಳೆ
ಗುಂದುತಿದೆ; ನಂದುತಿದೆ ಪೌರುಷಂ; ದೀನತೆಗೆ
ಸಂದುಹೋಗಿದೆ ಜೀವಮಿಂತಿರಲದೇನೊಸಗೆಯೋ ನಮ್ಮ ನಾಡಜನಕೆ ?

ಬರಿಯ ಬಯಲಾಡಂಬರದ ದೀಪಗಳ ಸಾಲ
ನುರಿಸುವಿರದೇಕೆ ಕನ್ನಡರೆ ? ನೀವಿಂದು ಸಿಂ
ಗರಿಸಿರೈ ಕರ್ಣಾಟಕಾಭಿಮಾನಜ್ಯೋತಿಯಿಂದೆ ನಿಮ್ಮೆದೆವನೆಯನು.
ಹರಿದು ಹಸಗೆಟ್ಟ ನಾಡಿದನೊಂದುಗೂಡಿಸುತೆ
ನೆರೆನಾಡಿಗರ ಕೂಡೆ ತಲೆಯೆತ್ತಿನಿಂತು ಬಿ
ತ್ತರಿಸಿರೊಸಗೆಗಳನಂದೇ ಸಾರ್ಥಮಹುದು ದೀವಳಿಗೆ ನಮ್ಮಾ ನಾಡಿಗೆ.

# ಹೊಸಹಾದಿ

ಹೊಸಹಾದಿಯನು ಹಿಡಿದು ನಡೆಯಣ್ಣ, ಮುಂದೆ!
ಹೊಸಜೀವ, ಹೊಸಭಾವ, ಹೊಸವೇಗದಿಂದೆ.

ಜಗಕೊಂದು ಯುಗಕೊಂದು ಹೊಸ ಹೆಸರು ಬೇಕು;
ನಗೆಗೊಂದು, ಬಗೆಗೊಂದು, ಹೊಸ ಕುಸುರು ಬೇಕು;
ಹೊಸತನವೆ ಜೀವನದ ಪ್ರಗತಿಯ ರಹಸ್ಯ;
ಹೊಸತನವೆ ಮನುಜತೆಯ ವೈಸಿರಿಯ ಲಾಸ್ಯ!

ಹಿಂದಿನೊಳ್ಳಿತೊ ಕೆಡುಕೊ—ಅದು ಭೂತವೃತ್ತ;
ಇಂದಿಗದು ಮುಂದಿಗದು ಬರಿಯ ಸ್ಮೃತಿಮಾತ್ರ!
ಹಳೆಹಾದಿ ನಡೆಗಲಿವವರೆಗೆಮಗೆ ಸಾಕು;
ಬಲಿವುದಕೆ, ನಲಿವುದಕೆ ಹೊಸಹಾದಿ ಬೇಕು!

ದೂರದೊಳಗದೊ ಮುಗಿಲು ನೆಲವ ಮುಟ್ಟುವೊಲು
ತೋರುತಿದೆ. ನಿಜವೆ? ಬಳಿಸಾರಿ ಪರಿಕಿಸಲು
ತೋರದೇ ಹಸನಾಗಿ ಹೊಸ ದೇಶ, ದೇಶ?
ವೀರನಿಗೆ, ಧೀರನಿಗೆ ಸಾಹಸನಿವೇಶ!

ದಿನದಿನವು ತಿರುತಿರುಗಿ ಮನವಾರೆ ನಲಿದು,
ದಿನದಿನಕೆ ಹೊಸ ತಿಳಿವು ಹೊಸ ರೂಹುವಡೆದು,
ಕುಣಿಕುಣಿವ ಮುಗಿಲೋಳಿ ಕರೆಯುತಿದೆ ನಿನ್ನ;
ಹೆಣವಾಗಿ ಮನೆಯೊಳಗೆ ಮಲಗುವೆಯ ಚೆನ್ನ?

"ನಂದನದ ತನಿಗಂಪನುಂಡಿದೋ ಬಂದೆ!
ಒಂದೆರಡೆ? ಅಲ್ಲಿನಾ ಸೊಬಗೆನ್ನ ತಂದೆ!"
ಎಂದು ಕಿವಿಯೂದುತಿದೆ ಸುಳಿವ ತಂಗಾಳಿ;
ಮುಂದಡಿಯನಿಡು, ಗೆಳೆಯ, ಧೈರ್ಯವನು ತಾಳಿ!

ಅದೊ ನೋಡು! ಹಕ್ಕಿ ಮರಮರಗಳಲಿ ನಿಂತು
ಮೃದುಮಧುರಕಂಠದಲಿ ಕುಕಿಲುತಿಹುದಿಂತು :—
"ಇದುವರೆಗದಾರರಿಯದೂರಿಂದ ಬಂದೆ;
ಎದೆಗಾರ, ಬಲುಹಿದೆಯೆ? ಬಾ, ಬೆನ್ನ ಹಿಂದೆ!"

ಎಲೆ ಪೌರುಷಧ್ವಜನೆ! ಹಿಂದೆಗೆಯಬೇಡ;
ಚಲಬಲದ ಸವ್ಯಸಾಚಿತ್ವವಿರೆ ಮೂಢ!,
ಗೆಲವರಿದೆ? ನುಗ್ಗಿನಡೆ, ಹಿಗ್ಗಿನಡೆ, ಮುಂದೆ!
ತಿಳಿವುಕಡಲಿನ ಗಡಿಗೆ ನಡೆವ ಹುರುಪಿಂದೆ.

ಅಂಜದಿರು, ಗೆಳೆಯ! ಹೊಸಹಾದಿಯನು ಹಿಡಿಯೆ;
ಮಂಜುತರ ಸೃಷ್ಟಿಗಾನದಲಿ ಮೈಮರೆಯೆ;
ಎಂಜಲಾಗದ ಮಧುರಮಧುರಸವ ಸವಿಯೆ;
ರಂಜಿಸುವ ಕಾಡುಮೇಡುಗಳನಂಡಲೆಯೆ!

# ಹೊಸಬಾಳು

ಅಳಲ ಕೆಸರೊಳು ಹುಗಿದ ಹಳೆಬಾಳ ಕೊಳೆಹೆಣದ
ತಲೆಯಿಂದ ಚಿಮ್ಮುವೀ ಬೆಳಕಿದೇನು ?
ಬಳಲಿ ಬೆಂಡಾದೊಡಲ ಮರುಭೂಮಿಯೊಳು ಜೀವ
ಕಳೆಯು ಕರುವಿಡುವ ರಸದೊರತೆಯೇನು ?
ಬಗೆಮುಗಿಲ ತುರುಗಲನು ಕಳೆದು ತನ್ನೆಳನಗೆಯ
ಮೊಗವಾಡವನು ತೊಡಿಪನಾವ ಭಾನು ?
ಜಗದಗಲದಲಿ ಹೊಸತು ಹಿರಿಯಾಸೆಗಳ ಚಿಗುರ-
ನೊಗೆಯಿಸುವ ಜೀವರಸವೃಷ್ಟಿಯೇನು ?

ಇದು ನನ್ನ ಹೊಸಬಾಳು ; ಕವಲು ಕವಲಾಗಿ ಹ
ಬ್ಬಿದೆ ದಿಗ್ದಿಗಂತ ಲೋಕಾಂತಗಳನು.
ಮಧುಮಾಸಮೃದುಹಾಸಗಳ ನವ್ಯಭವಿತವ್ಯ
ದುದಯವಂ ಕೂಗಿ ಕರೆಕರೆಯುತಿಹುದು !
ಬಣ್ಣಬಣ್ಣದ ಬೆಡಗು-ಬಿನ್ನಾಣದಲಿ ಬರೆದ
ಹೊಂಗನಸುಗಳ ಕೋದು ತೊಡಿಸುತಿಹುದು ;
ಮಣ್ಣಿನಲಿ ಸ್ವರ್ಣವನು ಬೆದಕಲುದ್ಯೋಗಿಸುವ
ಪನ್ನತಿಕೆಯಲಿ ಮನವ ಮಿಡಿಸುತಿಹುದು.

ಹೊಸಹುರುಪು-ಹೊನಲಿನಲಿ ಸಾಹಸೋನ್ನತವೀಚಿ
ವಿಸರಗಳ ಬೆಳ್ನೊರೆಯ ಮೇಲೆ ತೇಲಿ
ಹೊಸಬಾಳು ಸಾಗುತಿದೆ-ಸಾಗುತಿದೆ, ಜಲಕೇಳಿ
ಯೆಸಗುವುದೆ ಪುರುಷಾರ್ಥವೆಂದು ಸಾರಿ !
ಹೆರವರಡಿ ಸೋಂಕದಭಿನವಮಾರ್ಗದಲಿ ನಮ್ಮ
ಪುರುಷಕಾರಜ್ಯೋತಿ ಬೆಳಗುತಿರಲು
ಪರರರಿವುಗಳ ಗಡಿಯ ಮೀರಿದಜ್ಞಾತಗುಹೆ
ಗಿರಿಗಳೆಡೆ ಹೊಸಬಾಳು ತಿರುಗುತಿಹುದು !

ಅಟ್ಟುದನು ತಿನದೆ ಕಹಿಯೆಂದು ಕಡೆಗಂಡು ಬಾಯ್-
ಬಿಟ್ಟು ಹಸಿವೆಂದೊರಲಲೇಕೆ, ಹೇಳು ?
ದಿಟ್ಟಗಳ ಮುಗಿದು ಕುರುಡಾದೆನೆಂದಳಲು ಕೈ
ತಟ್ಟಿ ನಗರೇ, ಕಂಡುಕೇಳಿದವರು ?
ಹುಟ್ಟಿಯೇ ಕೆಟ್ಟೆನೆಂಬೀ ಭಾವದಿಂದೆ ಮುರ
ವಟ್ಟು ನೀಂ ಗೈವ ಪುರುಷಾರ್ಥವೇನು ?
ಹುಟ್ಟುಗಳ ನಾಟ್ಯರಂಗದಲಿ ವ್ಯೈಮುರೆತು ಕುಣಿ
ವಷ್ಟೆ ಸಂತಸ ನಮಗೆ ಸಾಕು, ನೋಡು !

ಪರುಷಚಿತ್ತದ ವಿಧಿಯ ಕರುಬುಗುವ ಕಣ್ಗಳನು
ಪುರುಷಕಾರದ ಕಾಂತಿ ಕೋರಯ್ಸದೆ ?
ಹರಣವನು ಮುಡಿಪಾಗಿ ಕೆಡಹಿ ಸತತೋದ್ಯಮುವ
ಮೆರೆಯೆ, ತಿರೆಯೆಲ್ಲ ಬಂದೋಲೈಸದೆ ?
ತಿರೆಗೆ ಹೊರೆಯಾಗಿ ಕೊರಡಂತೆ ಕೆಡೆದರೆ ನಾಯಿ
ನರಿಗಳಿಗು ಕೀಳಾಗದೇನು, ಬಾಳು ?
ಚರಿಪ ಗಾಳಿಯೆ, ಬಿರಿವ ಹೂವೆ, ಕಿರುತಾರಗೆಯೆ,
ಹರಿವ ಹೊನಲೇ ಬೀಳುಗಳೆಯುವೇನು ?

'ಮೂರುಗಳಿಗೆಯ ಬಾಳ್ವೆ !' ಎಂದೇಕೆ ಕಣ್ಣೀರ
ಧಾರೆಯನು ಸುರಿಸಿ ಬಿಸುಸುಯ್ಯುತಿರುವೆ ?
ಮೀರಿರುವನಂತಕಾಲದ ಬೃಹಜ್ಜೀವನವೆ
ಸೇರಿಬಂದಿರುವ ರಣಧೀರನಿರುವೆ !
ಇಂದು ಹೊಸಬಾಳ ಬೆಳಗಿನೊಳೆದ್ದು ಭರದಿ ಭೋ
ರೆಂದಾತ್ಮವಿಶ್ವಾಸಕಹಳೆ ಮೊಳಗೆ,
ಮುಂದುಮುಂದಕೆ ಸಾಗು ಕಲ್ಪಕಲ್ಪಾಂತರವೆ
ಹಿಂದೆ ಸರಿದರು ನೀನು ಹಿಂಜರಿಯದೆ !

# ಗಾಳಿಯೊಡನೆ!

೧

ಗಾಳಿಯೊಡನೆ ಗಾಳಿಯಾಗಿ
ಧೂಳಿನೊಡನೆ ಧೂಳಿಯಾಗಿ
ಮೇಲುನಾಡಿನೆಡೆಗೆ ತನ್ನ
ಮೊಗವನೆತ್ತುತೊಮ್ಮೆಗೆ ;
ಕೀಳುಬಗೆಗಳಾಳದಲ್ಲಿ
ಮುಳುಗುಮುಳುಗುತೊಮ್ಮೆಗೆ ;
ಹಾರುತಿಹುದು, ಹೊರಳುತಿಹುದು,
ನನ್ನ ಚಪಲಚಿತ್ತವು :
ತೀರದಾಸೆ ಬಾರದಾಸೆ
ಬರೆದ ವಿಕಟಚಿತ್ರವು !

೨

ಕರ್ಣಧಾರನಿಲ್ಲದೊಂದು
ಹಡಗದಂತೆ ಸಾಗುತ,
ಪರ್ಣಮಾತ್ರದಂತೆ ಜಗದ
ಮಣ್ಣೊಳಿಳಿದು ಮುಸುಳುತ,
ಗಳಿಗೆಗೊಂದು ಬಣ್ಣ ತಳೆವ
ಸಂಜೆಮುಗಿಲ ತೆರದಲಿ
ನೆಲೆಯ ತಿಳಿಯದಳಲುತಿಹುದು
ಹಲವುತನದ ಹೆಸರಲಿ !

೩

ಕಂಡು ಮಾತನಾಡಿ ಮೈ
ದಡವಿ ನಗಿಸಿ ನಲಿವರಿಲ್ಲ ;
ಬೆಂದ ಬಗೆಗೆ ಸೊದೆಯನೆರೆದು
ಕಂಬನಿಯನು ತೊಡೆವರಿಲ್ಲ ;

ಜಗದ ಹಣತೆಗೆರಗಿ ಎರಗಿ,
ಗರಿಯು ಗರಕಿ ಸೊರಗಿ ಸೊರಗಿ,
ಅಳಲುತಿರಲು ಬಗೆಯ ಬಳಿಗೆ
ಬಂದು ನಿಲುವ ಗೆಳೆಯನಿಲ್ಲ!
ಅಣ್ಣ ಬಾರ, ತಮ್ಮ ಬಾರ,
ಚಿಣ್ಣ ಬಾರ, ಎಂದು ಕರೆದು,
ಒಂದೆ ಕರುಳ ಕುಡಿಗಳೆನಿಪ
ತನುವ ನೆರೆಯ ಮಂದಿಯಿಲ್ಲ;
ನಲ್ಲ ಬಾರ, ಮಲ್ಲ ಬಾರ,
ಎಂದು ಒಲವನುಣಿಸಿ ತಣಿಸಿ
ಕನಸುನನಸುಗಳನು ತನ್ನ
ಕರದಿ ಮಿಡಿವ ಕೆಳದಿಯಿಲ್ಲ!

೪

ಎದೆಯ ಬರಿದುಮಾಡಿ ಕದವ
ತೆರೆದು ಬರಿದೆ ಕುಳಿತೆನು.
ಹಗಲು ಇರುಳು ಹೊರಳುತಿಹುವು;
ಋತುಋತುಗಳು ತೆರಳುತಿಹುವು;
ಅಲ್ಲಿ ಗಾಳಿ ಇಲ್ಲಿ ಹೂವು,
ಅಲ್ಲಿ ತೆರೆಯು ಕೂಡೆ ತೆರೆಯು,
ಮುಗಿಲು ಮುಗಿಲು, ತೊರೆಯು ತೊರೆಯು,
ಸರಸವೆಸಗುತಿರುವುವು!
ಆದರೇನು? ನನ್ನ ಬಗೆಯು
ಬರಿದು, ಬರಿದು, ನೀರವ!
ಬಾಳಲಾರೆ, ತಾಳಲಾರೆ,
ಮೌನದೊಂದು ಭಾರವ!

೫

ಇಲ್ಲಮೆಗಳ ಉರುಲು ನನ್ನ
ಬಾಳ ಬಿಗಿಯುತಿರುವುದು !
ಆರ ನಲ್ಮೆಗೈಯು ನನ್ನ
ಬಿಡಿಸಲಿಹುದೊ ತಿಳಿಯದು.

# ಹಿಂದುಮುಂದಿನೆಣಿಕೆಯೇಕೆ?

೧

ಹಿಂದುಮುಂದಿನೆಣಿಕೆಯೇಕೆ?
ಇಂದಿನಮೃತದೂಟಿ ಇರಲು,
ಅದನು ಸವಿಯ ಬಾರದೆ?
ಅದುವೆ ಮುದವ ತಾರದೆ?

೨

ಚಿಂತೆಗಿಲ್ಲ ಆದಿ-ಅಂತ;
ಅದರ ಬದುಕು ಚಿರ ಅಶಾಂತ;
ಸಂತಸವೋ ಬರಿಯ ಪಂತ!
ಅದನು ಹಿಡಿಯ ಬಾರದೆ?

೩

ಜಗವಿದೊಂದು ಚಕ್ರವ್ಯೂಹ,
ಬಗೆಗೆ ಅದನು ಹೊಗುವ ಮೋಹ!
ಅದನು ಹೊಗಲು ದುಡಿವೆವೇ?
ಮುಗಿಲ ಹೂವ ಮುಡಿವೆವೇ?
ಹೊಗುವ ಠಾವೆ ಮುಗಿವ ಠಾವು!
ಇದುವೆ ನೋಡು, ಹುಟ್ಟು-ಸಾವು!
ಅದರೊಳೇಕೆ ತೊಳಲುವೆ?
ತೊಳಲಿ ತೊಳಲಿ ಬಳಲುವೆ?

೪

ನೀನು ಬಂದೆ.—ಎಲ್ಲಿಂದ?
ತಂದುದೇನು? ಒಡಲನೊಂದ!
ಬಿಡಿಸಲಾರದದರ ಬಂಧ;
ಅದಕೆ ನೋಯುತಿರುವರೆ?

ಬೇಡಿ ಕಾಡಿ ಪಡೆದುದಲ್ಲ;
ಬೇಡವೆನಲು ಬಿಡುವುದಲ್ಲ;
ಅದಕೆ ಬೇಯುತಿರುವರೆ?

೫

ಬಂದ ಬಾಳು ಬರಿದು, ಮಣ್ಣು!
ಗೆದ್ದು ತರುವ ಬಾಳೆ ಹೊನ್ನು!
ಇದನು ತರಲು ಸಾಗದಿರಲು,
ಅದರ ಭಾರ ಮೀರಿ ಬರಲು,
ಯಾರ ತಪ್ಪು ?—ಯಾರ ತಪ್ಪು ?
ನಿನ್ನದಲ್ಲ.—ಒಪ್ಪು, ಒಪ್ಪು!
ಅದನು ನಚ್ಚಿ ಇದನು ಮೆಚ್ಚಿ
ಅವರಿವರೊಳು ಪ್ರೇಮ ಹೆಚ್ಚಿ
ಮೂರು ದಿನದ ಸರಸ ಹಾಸ;
ಬಳಿಕ ತಿಳಿವುದದರ ಮೋಸ:
"ಪ್ರೇಮವೊಂದು ಆಭಾಸ,
ಒಂದು ಅಂಧವಿಶ್ವಾಸ!"

೬

ಮನುಜಕುಲಕೆ ಹಿಂದುಮುಂದಿ
ನೆಣಿಕೆ ಬಂದಣಿಕೆ ಹಿಡಿದು
ಸಮನಿಸಿಹುದು ಶಕ್ತಿಹಾನಿ;
ಅಮರುತಿಹುದು ಚಿತ್ತಗ್ಲಾನಿ!
ನೊಂದ ಹೃದಯದಂಥವಾಣಿ
ಏರುತಿಹುದು ಮುಗಿಲಿನೇಣಿ!
ಹಿಡಿತ ಸಡಲಿ ಬಿದ್ದು ಕೆಳಗೆ
ಹೊರಳುತಿಹುದು ಗಳಿಗೆ-ಗಳಿಗೆ!

ಬುದ್ಧಿ ಬರಿಯ ಮದ್ಯ ; ಅದರ
ವಿದ್ಯೆ ಆತ್ಮವಂಚನೆ!
ಶ್ರದ್ಧೆಯೊಂದೆ ಹೃದ್ಯ ; ಅದರ
ಸಿದ್ಧಿಯೇ ವಿಮೋಚನೆ.

೭

ನಾನು-ನೀನು ! ಏನು, ಏನು ?
ಕಡಲಿನೊಡಲ ಮೀನು ಮೀನು!
ತಡಿಯು ಕಡೆಯು ನಮ್ಮ ಕಣ್ಣು
ಅಲ್ಲಿ ಬೆಳೆವುದಾಸೆಹಣ್ಣು !
ಮೀನುಗಾರನೊಂದು ಬರವ
ಕಾವುದೆಮ್ಮ ಹಣೆಯ ಬರೆಹ !
ಅದನು ಮೀರಲಾರೆವು ;
ಮೀರಿ ಬಾಳಲಾರೆವು !
ಇರುವು ನನ್ನದೆಂಬ ಜಂಭ
ಬರಿಯ ಮಾತಿನುರವಲು ;
ಇರುವು ನಿನ್ನದಲ್ಲ, ಹುಂಬ !
ಅದುವು ಸಾವಿನೆರವಲು !

* * *

ಹಿಂದುಮುಂದಿನೆಣಿಕೆ ಏಕೆ ?
ಇಂದಿನಮೃತದೂಟೆ ಇರಲು
ಅದನೆ ಸವಿಯ ಬಾರದೆ ?
ಅದುವೆ ಮುದವ ತಾರದೆ ?

# ಮಂದರದಿ ಮಿಡಿಯುತಿದೆ!

ಮಂದರದಿ ಮಿಡಿಯುತಿದೆ ನನ್ನ ಹೃದಯ!—ಬಿಂದು
ಬಿಂದುವಾಗಿಯೆ ಹೊಮ್ಮಿ ಹರಿವ ಕಂಬನಿಯು!

ಜಗದಗಲದಲಿ ತನ್ನ ಹಿರಿಯಾಸೆಗಳ ಹರಡಿ
ನಗುವ ನಲಿವ ಅದೊಂದು ಹೊಸತು ಮುಗುಳು,-ಭೂಮಿ
ತಾಯಿ ತಾ ಹಡೆದಿರುವ ಮುದ್ದುಮಗಳು,
ಮುಗಿದೆಸಳುಗಳು ಬಿರಿದು ನರುಗಂಪು ಹೊರಹರಿದು
ಬಗೆಗೊಂಬ ಮೊದಲೆ ಹಿಮರಾಶಿ ಸುರಿಯೆ,-ಮುಗುಳು
ನೆಲನ ಕೊಳೆಯಲಿ ಕಲೆತು ಕೊಳೆತು ಅಳಿಯೆ!

ಇನಿವಣ್ಣುಗಳ ಪಡೆದು ತನ್ನ ಬಾಳನು ಮೆರೆವ
ಕನಸುಗಳ ಹೆಣೆಯುತಿರುವೊಂದು ಮೊಳಕೆ,—ನೆಲನ
ಮನದಿ ಮೈದಳೆದ ಮುಡಿಯಾದ ಹರಕೆ,
ಕುಡಿಗಳೊಡೆವನಿತರೊಳೆ, ಚಿಗುರು ಚಿಗಿವನಿತರೊಳೆ,
ಕುರುಡುಹುಳುವೊಂದು ಕರುಬಿಂದ ಕಡಿಯೆ-ಮೊಳಕೆ
ತಿರೆಗುರುಳಿ ಕಂಗಳನು ಮುಗಿದು ಮಡಿಯೆ!

ಆವಾವ ದೇಶಗಿರಿಗುಹೆಗಳನೊ ತೊಳತೊಳಲು-
ವಾವೇಶದಿಂದೆ ಹೊರಟೊಂದು ಹೊನಲು-ಭೂಮಿ
ದೇವಿಯೆದೆಯಿಂದೊಗೆದ ಬುಗ್ಗೆಹಾಲು,
ಒಂದೆರಡು ಹಜ್ಜೆ ಮುಂಬರಿವನಿತರೊಳೆ ಮುಂದೆ
ಬಂದು ತಡೆಯುಲದೊಂದು ರಾಶಿಮಳಲು-ಅದರ
ದಾಹಕಾಹುತಿಯಾಗೆ ಹರಿವ ಹೊನಲು!

ನೂರುವರುಷದ ಮಿತಿಯು ಸಂತೋಷಜೀವನವ
ಕೋರಿ ಬಂದಿರುವ ಹೆಬ್ಬಗೆಯ ಜನರು,-ಬುದ್ಧಿ
ಸಾರ ರೂಪಾಂತ ಮನುಪುತ್ರರಿವರು!—

ಕೊಳುಕೊಳೆಂದೊರಲಿ ಬಡತನದ ಬೇಗೆಯಲಿ
ಬಾಳುವೆಯು ಕುದಿಯುತಿರೆ ನೊಂದು, ಬೆಂದು,—ಮೃತ್ಯು-
ವಾಲಯಕಕಾಲದಲಿ ತೆರಳೆ ಕಂಡು!

ಮಂದರದಿ ಮಿಡಿಯುತಿದೆ ನನ್ನ ಹೃದಯ,—ಬಿಂದು
ಬಿಂದುವಾಗಿಯೆ ಹೊಮ್ಮಿ ಹರಿವ ಕಂಬನಿಯ!

# ಗೆಳೆಯನಿಗೆ

ನನ್ನ ಬಾಳಬೇಗೆ ನಿನ್ನ ಬಗೆಯ ಮುಸುಕದಿರಲಿ, ಗೆಳೆಯ!
ನನ್ನ ಬನ್ನ ನಿನ್ನ ಅನ್ನದಲ್ಲಿ ವಿಷವ ಬೆರಸದಿರಲಿ;
ನನ್ನ ಕುಂದುಕೊರತೆ ನಿನ್ನ ಜೀವದೊರತೆಯನ್ನು ಕಲಕು
ವಲಕುಗೊಳಿಸದಿರಲಿ; ನನ್ನ ವಿಗಡಮನದ ಪಿಡುಗು ನಿನ್ನ
ಮನವ ಸೋಂಕದಿರಲಿ, ಗೆಳೆಯ! ಗಾಳಿಗೈಯ ಮುಗಿಲಿನಂತೆ
ಹೊನಲ ಹೊಡೆಯ ತಳಿರಿನಂತೆ, ದಾರಹರಿದ ಗಾಳಿಪಟದ
ವಿಕಟನಾಟ್ಯದಂತೆ ನಾವು ಸಾಗಬಹುದು ತಾನೆ, ಸೂತ್ರ-
ಧಾರನಿಚ್ಛೆ ತೋರಿದಂತೆ; ಒಂದು ತೊರೆ ಹಿಮಾದ್ರಿಯಲ್ಲಿ
ಒಂದು ವಿಂಧ್ಯಗಿರಿಯೊಳೊಗೆದು ಬಂದು ಹೊಂದುವಳಿಕೆಗಾಗಿ
ನೊಂದು ಬೆಂದರೇನು ಫಲವು? ಕೊಂದು ಕಳೆವ ಕಟುನಿರಾಶೆ!

ಮಂದಭಾಗ್ಯರಾವು ನಿಜವು; ಪ್ರೀತಿರಸದ ಮೃದುಮರಂದ
ದಿಂದ ಬೆಂದ ಬಗೆಯ ತಣಿಸದಾದೆವಣ್ಣ, ಮಾಡಲೇನು?
ಬಂದ ಹಾದಿ ಬೇರೆ, ಬಂದು ನಿಂದ ನೆಲೆಯು ಬೇರೆ, ಬೇರೆ;
ತಂದ ನಿಧಿಯು ಬೇರೆ, ಕೊಂಡುಕೊಂಡ ಸರಕು ಬೇರೆ, ಬೇರೆ!
ಒಂದು ಒಡಲ ಬಡಬದುರಿಗೆ ಬೆಂದು ಮಿಡುಕುತಿರುವ ಕಡಲು;
ಒಂದು ಮೆಲ್ಲೆಲರ್ಗೆ ನಸುವೆ ಹೊಳಕುತಿರುವ ಸರದ ಬೆಡಗು.
ಒಂದು ಶರದಚಂದ್ರನೆದೆಯ ಹಾಲನುಂಡ ಬೆಳ್ಮುಗಿಲು;
ಒಂದು ಮರದ ಮುಡಿಲ ಮರೆಯ ಕೆಂಪುತಂಪುತಳೆದ ತಳಿರು.
ಒಂದು ಹೃದಯಸಿಂಧುವಿನಲಿ ಮುಳುಗಿ ತನ್ನ ತಾನೆ ಮರೆತ
ವಿಚಲಜೀವ; ಒಂದು ಬಾಳ ಬಯಲಿನಲ್ಲಿ ತನ್ನ ನೆಲೆಯ
ಬೆಲೆಯನರಿತು ಸ್ಪಷ್ಟಭಾವಗಳಲಿ ನೆಟ್ಟಬಗೆಯ ಜೀವ!
ಅಳಲ ಬಿತ್ತಿ ಅಳಲ ಬೆಳೆದು ಅದನೆ ಲೋಕಕೀವುದೊಂದು;
ನೆಲದ ನಲವಿನೊರತೆಯಲ್ಲಿ ಮಿಂದು ನಿಂದ ಜೀವವೊಂದು!

—ಎರಡರೊಳಗೆ ಹೊಂದುವಳಿಕೆ-ಅದುವೆ ಮುಗಿಲಹೂವಲಾ!
ಕರಗುತಿಹುದು ಹೃದಯ; ಮೂಕವಾಗುತಿಹುದು ಭಾವ ಜೀವ

ಆದರೇನು? ನನಗೆ ನಿನಗೆ ತಾಳ ಬೇರೆ, ತಂತಿ ಬೇರೆ!
ಅದಕೆ ಪದವನಿಟ್ಟು, ತಾಳಗತಿಗೆ ಕುಂದು ಬರದಹಾಗೆ
ಕುಣಿಯಬೇಕು, ಮಣಿಯಬೇಕು, ತಣಿಸಬೇಕು ಬಾಳಬೇಗೆ!

# ಗೆಳೆತನ

ಕೊನೆಗಾಣದೆ ಬಿಗಿಮಾಣದೆ ತಳುವಬೇಕು, ಗೆಳೆತನ ;—
ತಳುವಬೇಕು : ನನಗೆ ನಿನಗೆ ಬರುವ ವರೆಗೆ ಕೊನೆದಿನ !
ತಳಿರತಳಿರ ತಳ್ಕೆಯಂತೆ ಮೃದುಲಮಧುರ ಜೀವನ ;
ಮಲರಮಲರ ಮಾಳ್ಕೆಯಂತೆ ಮನದ ಮನದ ಮಿದುತನ !

ಒಂದೆ ಗಾನತಾನ ನನ್ನ ನಿನ್ನ ಹೃದಯ ಮಿಲನಕೆ ;
ಒಂದೆ ಅಚ್ಚುಮೆಚ್ಚು ನಮ್ಮ ಭಾವಜೀವವಲನಕೆ ;
ಒಂದೆ ಅಂಕೆಸಂಖ್ಯೆ ನಮ್ಮ ಸೌಖ್ಯದ ಸಂಕಲನಕೆ ;
ಒಂದೆ ಗಮ್ಯಗತಿಯು ನಮ್ಮ ಜೀವನಸಂಚಲನಕೆ !

ಗುಡುಗುಮಿಂಚಿನಂತೆ ಒಂದುಗೂಡಿ ಬೆಳಗಿ ಮೊಳಗುವಾ ;
ಕಡಲುತಡಿಗಳಂತೆ ಒಂದನೊಂದು ತಡೆದು ತಡಹುವಾ !
ಗಾಳಿಕಿಚ್ಚಿನಂತೆ ಕೂಡಿಯಾಡಿ ತಿರೆಯ ಬೆಳಗುವಾ !
ಬಾನುಬುವಿಗಳಂತೆ ಒಂದಕೊಂದು ಸೀಮೆಯೆನಿಸುವಾ !

ತನ್ನತನವೆ ಎರಡು ಕವಲುಗೊಂಡ ಹಾಗೆ ಬಾಳುತೆ,
ಬನ್ನಬೇಗುದಿಗಳನೊಂದೆ ಜೀವವಾಗಿ ತಾಳುತೆ,
ಸುಗ್ಗಿಬರಲಿ, ಮಾಗಿಯಿರಲಿ, ಹೊಂದುವಳಿಕೆ ಅಳಿಯದೆ,
ಹಿಗ್ಗುವರಿಗೆ, ಗೆಳೆಯ, ಕೆಳೆಯ ಕನಸು ನನಸಿಗಿಳಿಯದೆ ?

ಮುಗಿಲ ಯುಗಲದಂತೆ ಬಂದು ಸೇರಿ ಸಾರಿ ಅಗಲದೆ,
ಹಗಲ ಮೊಗದ ರಾಗದಂತೆ ಸಂಜೆಯೊಡನೆ ಜಗುಳದೆ,
ಗಾಳಿಗೈಯ ತರಗಲಂತೆ ಕಲೆತು ತಿರುಗಿ ಕದಲದೆ
ಬಾಳಬೇಕು, ಬೆಳೆಯಬೇಕು, ಸಖ್ಯ ಕ್ಷಣಿಕವೆನಿಸದೆ !

ನಿನ್ನೊಳೊಂದೆ ಭಿಕ್ಷೆ, ಗೆಳೆಯ, ಅದುವೆ ಹೃದಯದಾನವು !
ಜನ್ಮಮೃತ್ಯುಗಳನು ನಗುವ ಪ್ರೇಮದಮೃತಪಾನವು !
ದುಃಖಸುಖಗಳನ್ನು ಮಿಗುವ ತ್ಯಾಗದಮರಗಾನವು ;
ಹೊಂದುವಳಿಕೆ ತವದ ಸಖ್ಯಯೋಗದಭ್ರಯಾನವು !

ನನ್ನ ನಿನ್ನ ಜೀವ, ಗೆಳೆಯ, ಒಂದಕೊಂದು ಪೂರಕ;
ನನ್ನ ನಿನ್ನ ಭಾವ ಒಂದಕೊಂದು ಕಾಂತಿದಾಯಕ!
ಒಂದು ಹೃದಯ ಧನುವು; ಮೇಣದೊಂದು ನಿಶಿತಸಾಯಕ;
ಒಂದು ಗಂಗೆ, ಒಂದು ಯಮುನೆ;—ಏಕ ಮಾರ್ಗವಾಹಕ!

ಹೀಗೆ ಬಾಳ್ವೆನೆಂಬ ಬಯಕೆಯೊಂದದೇಕೊ ಹಿರಿದಿದೆ;
ಯೋಗವಿದು ನಿರರ್ಥ, ನಿನ್ನ ಹೃದಯಯೋಗ ಬರದಿರೆ.
ಬರಿಯ ಕೆಂಡ ಗಳಿಗೆಯೊಳಗೆ ನಂದಿ ಕಾಂತಿಯುಳಿಯುದೆ?
ನೆರವು ಬರಲು ಗಾಳಿಯಿಂದ ಅದರ ಬಾಳು ಬೆಳಗದೆ?

# ಮೈವೆತ್ತ ಲಾಲಿತ್ಯ

ವೈವೆತ್ತಲಾಲಿತ್ಯವನು ಕಂಡೆ ನಾ ಮೊನ್ನೆ—
ಭಾವಜೀವಗಳ ಸಂಸ್ಕಾರಸಾಕಾರವನು,
ನವ್ಯತೆಯ ಮರ್ಮವನು ಭವ್ಯತೆಯ ಕರ್ಮವನು,
ಕಾವ್ಯಕಮಲದ ಮಧುರಮಕರಂದಸಾರವನು,
ಜೀವನಪಯೋನಿಧಿಯ ಪೀಯೂಷಪೂರವನು.

ಬಿಳುಪುಕೆಂಪುಗಳಮುಳುಬೆಳಸವಳ ಮೈಸೊಬಗು ;
ಮೆಲುಪುತಂಪುಗಳವಳಿನಲಿವವಳ ಬಗೆಬೆಡಗು ;
ಚೆಲುವಿಕೆಯ ನರುಗಂಪನಿಡಿಕಿರಿದ ಮೈಮುಗುಳು ;
ಒಲವುನಲವಿನ ದಡವನೆರಡನಪ್ಪುವ ಹೊನಲು ;
ಸಲುಗೆಸಲ್ಲಾಪಗಳ ಕಿರುದೆರೆಯು ಹಿರಿಗಡಲು.

ಎಲರಿನಲೆಯಲೆಯೊಡನೆ ನಲವೇರಿ ತಲೆಯೊಲೆದು,
ಉಲಿವ ಮಧುಪಾವಳಿಯ ಗಾವಳಿಗೆ ಕಿವಿದೆರೆದು,
ಹಿರಿದು ಕಿರಿದೆನ್ನದೆಲ್ಲಕು ಸೊದೆಯನೆರೆದೆರೆದು,
ಬಳಿಸುಳಿವವರ ನೋಡಿ ನಕ್ಕು ನಲಿಯಿಸಿ ನಲಿದು,
ಒಳಗಂಪನೆದೆತಂಪನೆದೆಗೊಳಿಪ ಹೂವವಳು.

ತಿಳಿಗೊಳದ ಹಾಗೆ ತನ್ನೆದೆಗೆ ಕನ್ನಡಿ ಹಿಡಿದು,
ಬಳಿಸಾರಿದವರ ಕಣ್ಗಳನಲ್ಲಿ ಸೆರೆಹಿಡಿದು,
ನೆಲಮುಗಿಲ ಚೆಲುವನೇ ತನ್ನೊಡಲೊಳಿಡಿಕಿರಿದು,
ಸೆಳೆಮಿಂಚಿನಂತೆ ಅಲ್ಲಲ್ಲಿ ಮಿರಿಮಿರಿ ಮಿಂಚಿ
ಸೆಳೆದಪಳು ಲೋಕವನೆ ನಲವನೆಲ್ಲೆಡೆ ಹಂಚಿ.

ಅವಳಿರುವಳೆಲ್ಲಿ ದುಗುಡವೆ ಸುಳಿಯದಲ್ಲಲ್ಲಿ ;
ಅವಳೆದೆ ಪಳಂಚಿದರೆ ರಸ ಬಹುದು ಕಲ್ಲಲ್ಲಿ !
ಅವಳ ನಗೆ ಮುಗುಳುತಿರೆ ಹೊಗೆವೆದೆಗೆ ಸೊದೆಯ ಸ್ರುತಿ ;
ಅವಳ ಕಣ್ಮಿಣಿಯುತಿರೆ ಎದೆಎದೆಯ ತಾಳಗತಿ ;
ಅವಳ ನುಡಿ ಮಿಡಿಯುತಿರೆ ಮಿಡಿದಪುದು ಜೀವತತಿ !

ಕಂಡವರ ನಯನಗಳಿಗವಳದೊಂದೇ ನೆನವು ;
ಬೆಂದೆದೆಗೆ ಕೊನೆವರೆಗೆ ಚೆಲುವಿದೊಂದೇ ತಣಿವು ;
ತಿಳಿವವರ ತಿಳಿವುಗಣ್ಣಿನ ಕೊನೆಯ ಹೊಂಗಣಸು ;
ನೆಲದವರ ಕನಸು, ಮುಗಿಲವರಿಗೂ ಸಿಗದುಣಿಸು.
ವೈವೆತ್ತಲಾಲಿತ್ಯವನು ಕಂಡೆ ನಾ ಮೊನ್ನೆ—.

# ಕಲ್ಲಾಗು, ಕಲ್ಲಾಗು!

೧

ಕಲ್ಲಾಗು, ಕಲ್ಲಾಗು! ಬಾಳ ಬಿರುಗಾಳಿಯಲಿ
ಅಲ್ಲಾಡದೆಯೆ ನಿಲ್ಲು ನಿಲ್ಲು, ಜೀವ!
ನೆಲೆಯಿಲ್ಲದಲೆದಾಟ ಎನಿತುವರೆಗೆ?—ಬಯಲು
ದೊರೆಯ ಬೆಂಗಡೆಯೋಟ ಯಾವ ಸುಖಕೆ?
ಮೆಲುಪುತಣುಪುಗಳ ಸುಖಸಂಭ್ರಮದ ಬಾಳುವೆಯ
ಬಯಕೆಯನು ಬಿಸುಡಯ್ಯ ನೀನು ದೂರ!
ಹುಲ್ಲುಗಿಡಗಳಿಗಿಲ್ಲ ಇಲ್ಲಿ ತಾಣ;
ಬಳ್ಳಿಹೂಗಳ ಬಾಳಿಗಿಲ್ಲ ಮಾನ;
ಕಲ್ಲಿಗೊಂದೇ ಇಲ್ಲಿ ಸ್ಥಾನ, ಮಾನ!

೨

ಗಿಡಮರಗಳನು ತೂಗಿ ತೂಗಿ ತೊತ್ತಳದುಳಿದು
ಹೂಬಳ್ಳಿಗಳನು ಹುಟ್ಟಳಿಯೆ ಹೊಡೆದು,
ಎಲ್ಲವನು ಮಣ್ಣಾಗಿಸುವೆನೆಂದು ಬೊಬ್ಬಿರಿದು
ಬಿರುಗಾಳಿ ಬಂದು ಮೊರೆಮೊರೆಯ ಬಹುದು;
ಹುಬ್ಬುಗಂಟಿಕ್ಕಿ ಗುಡುಗುಡಿಸಿ ಬಾನ್ ಸಿಡಿಸಿಡಿದು
ಸಿಡಿಲಾಗಿ ಬಂದು ಬಂದೆರಗಬಹುದು;
ಕಾಳಮೇಘಾಳಿ ರೋಷಾಗ್ನಿಯಲಿ ಕುದಿಕುದಿದು
ಮಳೆಯಾಗಿ ಬಂದು ತಳ್ಪೊಯ್ಯಲಿಹುದು;
ಮುನಿದ ಬಿಡುಗಣ್ಣರಂಭೋದತೂಣೀರದಿಂ
ಮಿಂಚುಗಳ ಬಾಣಗಳನೆಸೆಯಬಹುದು;
ಆದರೂ ಬೆದರದಿರು ನೀನೊಳಗು ಹೊರಗು!
ಅಳುಕದೆಯೆ, ಬಳುಕದೆಯೆ, ನಿಲ್ಲು ಕೊನೆವರೆಗು!

೩

ಬಳಿಯು ಕೋಗಿಲೆ ಕೂಗಿ ಕರೆಯುಬಹುದು ;
ಅಳಿಮಾಲೆ ಬಂದು ಮೊರೆಮೊರೆಯುಬಹುದು ;
ಮೆಲ್ಲೆಲರು ಬಂದು ಮೈದಡಹಬಹುದು ;
ಚೆಲುವಾಗಿ, ಒಲವಾಗಿ ಹೂವದೊಂದು
ಬಲವಾಗಿ ಮನಸೆಳೆಯುಲೆಳಸಬಹುದು !
ಆದರೂ ಬದಲದಿರು, ಕದಲದಿರು, ನೀನು !
ಮೋಹಮಾಯೆಗೆ ಸಿಲುಕದೆಯೆ ನಿಲ್ಲು, ನಿಲ್ಲು !

೪

ಹೂವಾಗಿ ತನ್ನೆದೆಯ ಮಧುರಮಕರಂದವನು
ದಿಕ್ಕು ದಿಕ್ಕಿಗೆ ಚೆಲ್ಲುವಾಸೆ ;
ಮುಗಿಲಾಗಿ ಹಸಿಯಾಗಿ ಜಗದ ಕಂಬನಿಯಾಗಿ
ಮಣಿಯಾಗಿ ಕುಣಿಯುವಾಸೆ ;
ಅಳಿಯಾಗಿ ಗಿಳಿಯಾಗಿ ನೂರಾರುಬಗೆಯಾಗಿ
ನಗೆಯಾಗಿ ನಲಿಯುವಾಸೆ ;–
ನಿನ್ನೊಳಿರಬಹುದಯ್ಯೊ, ಮಾಡಲೇನು ?
ಅದು ಮುಗಿಲಹೂವದನು ಮುಡಿವೆಯೇನು ?

೫

ಮೃದುವಾಯ್ತು, ಕುಸುಮಕೋಮಲವಾಯ್ತು ಮನ ; ಜೀವ–
ಕಾರುಣ್ಯರಸಕೆ ಸೆಲೆಯಾಯ್ತು ಹೃದಯ ;
ಬಾಳು ಸಂಸ್ಕೃತಿಮಧುರ ; ಕಾವ್ಯನಂದನದ ಚಿರ
ಸಂಚಾರಿಯಾದೆ, ಹೇ ಮತ್ತಮಧುಪ !
ಅವನಲ್ಲಿ, ಇವನಲ್ಲಿ, ಅದರಲ್ಲಿ, ಇದರಲ್ಲಿ
ತನ್ನತನವನು ಕಂಡುಕೊಂಡ ಭೂಪ !
ಸಚರಾಚರದ ಬಾಳಿನಾಳದಲಿ ಮುಳುಮುಳುಗಿ
ಬಂತು ಅಂತಃಕರಣ ; ಅಯ್ಯೊ ಪಾಪ !
ಆದರೇನಂತೆ ಮನವಾಯ್ತು ಅಬಲ ;

ಗಾಳಿಗೊಡ್ಡಿದ ತಳಿರಿನಂತೆ ಚಪಲ!
ಇದು ವಿಧಿಯ ನಿಷ್ಠುರದ ರಾಜ್ಯಭಾರ—ಇಲ್ಲಿ
ಮೃದುತೆ ಬಲಹೀನತೆಗೆ ಸಂಚಕಾರ!

೬

ಅಕ್ಕಟಾ! ಬೇಕಾದುದೇನು, ಬಂದೀ ಭವದಿ?
ಮರುಳುಕರುಳಿನ ಕುರುಡುಕುಣಿತವಲ್ಲ!
ತನುಮನವನುಕ್ಕಾಗಿ ಕಾಯಿಸುವ ದುರ್ದಮ್ಯ
ಶಕ್ತಿ; ಬಯಲಾಸೆಗಳ ಗುಣಿತವಲ್ಲ!
ಅದಕಾಗಿ ಕಲ್ಲಾಗು,—ಕಠಿನ, ಕಠಿನ!
ಮಿದುವಾಗಬೇಡ; ಹಾ! ಜತನ, ಜತನ!

೭

ಕಲ್ಲಾಗು, ಕಲ್ಲಾಗು! ಬಾಳ ಬಿರುಗಾಳಿಯಲಿ
ಅಲ್ಲಾಡದಿರು ನಿಲ್ಲು, ನಿಲ್ಲು, ಜೀವ!
ಎನಿತುವರೆಗೀ ಬರಿಯ ಬವಣೆಯುಕಟಾ!–ಬಾಳಿ–
ಗಿಲ್ಲ ಸ್ಥಿರತೆಗು ಮಿಗಿಲು ಮಿರುಪ ಮುಕುಟ!
ಕರಗದಿರು ಬಿಸಿಗಿಟ್ಟ ಬೆಣ್ಣೆಯಂತೆ,
ರವಿಕಿರಣ ಮುದ್ದಿಡುವ ಮಂಜಿನಂತೆ,
ಬಾಡದಿರು ನೆಲಕಿಳಿದ ಮಲರಿನಂತೆ,
ಬಾಗದಿರು ತೊನೆತೊನೆವ ಬಳ್ಳಿಯಂತೆ;
—ಕಲ್ಲಾಗು, ಕಲ್ಲಾಗು!

# ನನ್ನ ಕಣ್ಣ ಮುಂದೆ ನಿಲ್ಲು

೧

ನನ್ನ ಕಣ್ಣ ಮುಂದೆ ನಿಲ್ಲು
ನಲ್ಲೆ ! ಒಂದೆ ನಿಮಿಷ ;
ಮರೆತುಬಿಡುವೆ ಅಳಲ ಬಸಿರ
ನೂರು ವರುಷ ವರುಷ ;
ತರಿಸಿಬಿಡುವೆ ನನಸಿಗೆನ್ನ
ಹಲವು ಹೊನ್ನ ಕನಸ !
ನನ್ನ ಕಣ್ಣ ಮುಂದೆ ನಿಲ್ಲು,
ನಲ್ಲೆ ! ಒಂದೆ ನಿಮಿಷ !

೨

ಬಾಳ ಕೊನೆಯವರೆಗು ಒಂದೆ
ತಾಳಲಯವು ಭಾವಭಂಗಿ,
ನಾನೆ ನಿನ್ನ ಹೃದಯಸಂಗಿ,
ಎಂತಾದರು ಕುಣಿಯುವಾ !
ಲಾಸ್ಯಹಾಸ್ಯ ಒಂದೆ ನಿಮಿಷ,
ತಾಂಡವವೋ ವರುಷ ವರುಷ ;
ಮೂಕಶೋಕರಸದ ನಿಕಷ
ನಮ್ಮ ಪ್ರಣಯಸಿದ್ಧಿಗೆ
ನಮ್ಮ ಹೃದಯವೃದ್ಧಿಗೆ.

೩

ಏಕೊ ಒಲವು ಮೊಳೆಯಿತು,
ಎದೆಯನಮರಿ ಬೆಳೆಯಿತು ;
ಯಾವ ಯುಗದ ಪುಣ್ಯಫಲವೊ
ಬಾಳು ತುಂಬಿ ಬಂದಿತು ;

ಒಲವುಬಳ್ಳಿ ಹೂವು ತಳೆದು,
ನವವಸಂತದೊಡನೆ ಕೆಲೆದು
ನಲಿವ ಮೊದಲೆ ನನ್ನ ನಿನ್ನ
ಬಾಳು ಕವಲುಗೊಂಡಿತು.
ವಿರಹದ ಬಿರುಬೇಸಗೆಯಲಿ
ನಿಟ್ಟುಸಿರಿನ ಬೇಸುರಿಯಲಿ
ಜೀವ ಮಿಡುಕುತಿರುವುದು:
ಹೋದ ಬಾರದಿರುವ ಸೊಗದ
ದೂರ ಸಾರಿ ಹೋದ ಮೊಗದ
ನೆನಹದೊಂದೆ ನನ್ನ ಜಗದ
ಇರುಳ ಬೆಳಗುತಿರುವುದು.

೪

ನಿನ್ನ ನೋಡಿದೊಡನೆ ನಲ್ಲೆ,
ಕೊರಲು ಬಿಗಿದು ಬರುತಿದೆ;
ಯುಗಯುಗಗಳ ಹೃದಯತಾಪ
ಚಿಮ್ಮುತಿಹುದು ಕಣ್ಣೊಳೆ!
ಮಾತು ಬತ್ತಿ ಹೋಗುತಿಹುದು
ನನ್ನ ಬಗೆಯ ಬುಡದೊಳೆ!
ನಗುವು ಹಿಂಗಿ ಇಂಗುತಿಹುದು
ತುಟಿಗಳ ಬೆಂಗಡೆಯೊಳೇ.
ಪ್ರೀತಿ ಮಾತ್ರ ಸರ್ವವ್ಯಾಪಿ;
ನವಿರುನವಿರೊಳೂ ವಿಲಾಪಿ;
ನಿನ್ನ ಮುಂದೆ ದೇಹವೆಲ್ಲ
ರಸನೆಯಾಗಿ ನಿಂತಿದೆ;
ನುಡಿಗು ಮೀರಿದೆನಿತೊ ಭಾವ-
ವಿಲ್ಲಿ ಮೂಡಿದಂತಿದೆ.

೫

ನನ್ನ ಕಣ್ಣ ಮುಂದೆ ನಿಲ್ಲು
ನಲ್ಲೆ ! ಒಂದೆ ನಿಮಿಷ !
ಮರೆತುಬಿಡುವೆ, ಅಳಲ ಬಸಿರ
ನೂರು ವರುಷ ವರುಷ ;
ತರಿಸಿಬಿಡುವೆ ನನಸಿಗೆನ್ನ
ಹಲವು ಹೊನ್ನ ಕನಸ ;
ನನ್ನ ಕಣ್ಣ ಮುಂದೆ ನಿಲ್ಲು,
ನಲ್ಲೆ, ಒಂದೆ ನಿಮಿಷ !

# ನಿನಗೆ ನೀನೇ!

೧

ನಿನಗೆ ನೀನೇ, ಗೆಳೆಯ, ನಿನಗೆ ನೀನೇ!
ಅವರಿವರ ನಂಬುಗೆಯ ಮಳಲ ರಾಶಿಯ ಮೇಲೆ
ಬಾಳಮನೆಯನು ಮುಗಿಲಿಗೆತ್ತರಿಸಲಿಹೆಯಾ?
ನಿನಗೆ ನೀನೇ, ಗೆಳೆಯ, ನಿನಗೆ ನೀನೇ!

೨

ಮನ ಸಿಡಿದು ಹೋಳಾಗುತಿರುವ ವೇಳೆ,
ಕನಸುಗಳ ಗುಳ್ಳೆಗಳು ಒಡೆದೊಡೆದು ಬೀಳೆ,
ಜನುಮದೀ ರಿಂಗಣದಿ ಕಾಲುಗಳು ಸೋಲೆ,
ನಿನಗೆ ನೀನೇ, ಗೆಳೆಯ, ನಿನಗೆ ನೀನೇ!
ಚೆಲುವಿಕೆಯ ಹುಚ್ಚೊಳೆದೆ ಕೊಚ್ಚಿ ಹೋಗುತಿರೆ,
ಒಲವು ವಿರಹದ ಬೆಂಕಿಯಲ್ಲಿ ಬೇಯುತಿರೆ,
ಗೆಳೆತನಕೆ ಹುಳಿಬಂದು ಹೆಪ್ಪುಗಟ್ಟುತಿರೆ,—
ನಿನಗೆ ನೀನೇ, ಗೆಳೆಯ, ನಿನಗೆ ನೀನೇ!

೩

ತೋಟದಲಿ ಗಿಡಗಿಡಕೆ ಹೂವರಳಿ ನಿಲ್ಲೆ,
ಮಕರಂದದುತ್ಸವವು ಬಿತ್ತರಿಸುವಲ್ಲೆ
ಮರಿದುಂಬಿ ಸಾಲೇನು, ಅರಗಿಳಿಯ ಮಾಲೆ!
ಬರೆ ಮಾಗಿ, ಬರಿತೋಟ, ಭಣಗುಡುವುದಲ್ಲೆ!
ನಿನ್ನ ಬಗೆ ನಗೆಯಾಗಿ ಹರಿದು ಬರುತಿರಲು,
ಸಂತಸದ ಸಂಗೀತ ಹೊನಲಿಡುತಲಿರಲು,
ಏನೊಲವು, ಏನು ಕೆಳೆ, ಎಂಥ ಸುಮ್ಮಾನ!

ಏನಾಟ, ಏನೂಟ, ಎಂಥ ಸನ್ಮಾನ!
ನಿನ್ನ ಕರುಳನು ಕೊರಗುಹುಳು ಕಡಿಯುತಿರಲು,
ನಿನ್ನ ಮನದಿ ನಿರಾಶೆ ಮಂಜು ಮುಸುಕಿರಲು,
ಮೊಗದಿ ಕಾರ್ಮುಗಿಲೋಳಿ ದಾಳಿಗೊಂಡಿರಲು,
ಎಲ್ಲೊಲವು, ಎಲ್ಲಿ ಕೆಳೆ, ಎಲ್ಲಿ ಸುಮ್ಮಾನ?
—ನಿನಗೆ ನೀನೇ ಪ್ರಾಣ, ಮಾನ, ಸನ್ಮಾನ!

೪

ಜಗವೆಲ್ಲ ನಗೆಯ ಹೊಳೆಯಾಗಿ ಗುಳುಗುಳಿಸೆ,
ಸೊಗವಲ್ಲಿ, ಸೊಗವಿಲ್ಲಿ, ಬಂದು ಗಮಗಮಿಸೆ,
ಹುಣ್ಣಿಮೆಯ ದಿನದ ಗವಿಯೊಡಲಂತೆ ಮನವು
ತನ್ನ ಕತ್ತಲೆಗಂಜಿ ತನ್ನೊಳಡಗಿರಲು,—
ನಿನಗೆ ನೀನೇ, ಗೆಳೆಯ, ನಿನಗೆ ನೀನೇ!

ಕವಲುದಾರಿಯ ಮುಂದೆ ನೀ ಬಂದು ನಿಂದು
ಗುರಿ ಯಾವುದೆಂದು ಮುಂಗಾಣದಿರೆ ನೊಂದು
ಮನದ ಪೊರೆಪೊರೆಯೊಳುರಿಯೆದ್ದು ಭುಗಿಲಿಡಲು,
ನಿನಗೆ ನೀನೇ, ಗೆಳೆಯ, ನಿನಗೆ ನೀನೆ!

ನಿನ್ನೆದೆಯ ಮಾತು ನಿನ್ನೆದೆಯೊಳುಳಿದಿರಲು
ಅದರ ತಿರುಳನು ತಿಳಿವ ಮನ ಸುಳಿಯದಿರಲು,
ಮಾತುಮಾತಿಗು ವಾದ ಹೆಡೆಯೆತ್ತಿಬರಲು,
ಅದರ ವಿಷಕೀ ಜೀವ ಬೆಂದುಹೋಗಿರಲು,
ನಿನಗೆ ನೀನೇ, ಗೆಳೆಯ, ನಿನಗೆ ನೀನೇ!

೫

"ನೀನೆ ನಿನ್ನಯ ಬಂಧು, ನೀ ನಿನ್ನ ಶತ್ರು."
ನೀ ರಸಿಕ, ನೀನೆ ಹಾ! ರಸಿಕತೆಯ ವಸ್ತು;
ಸ್ವರ್ಗನರಕದ ಅಳಲುನಲವುಗಳ ಬಿತ್ತು,

ನೀನೆ ಬಾಳುವೆಯಿರುಳು, ನೀ ನಿನ್ನ ಹೊತ್ತು;
ನಿನ್ನೆದೆಯ ಪಾಡೆ ನಿನ್ನೊಲಯಿಸುವ ಹಾಡು;
ನಿನ್ನೊಡಲ ನಾಡೆ ನಿನ್ನೈಸಿರಿಯ ಬೀಡು.
ನಿನಗೆ ನೀನೇ, ಗೆಳೆಯ, ನಿನಗೆ ನೀನೇ!—

ಬಾಳ ಕಾಳೆಗದಲ್ಲಿ ಏಕಾಂಗಿ ವೀರ!
ನೇಹನಲುಮೆಗಳಿದೆಗೆ ಬರಿಯ ಆಹಾರ;
ನಿನ್ನ ಅಂತಃಸತ್ವಸಾರ ಆಧಾರ!
ಉಳಿದೆಲ್ಲವೂ ಬೆಸಕೆ ಬರದ ಸಿಂಗಾರ!
ನಿನ್ನಾತ್ಮದಿದಿರು ನೀ ನಿಂತಿರುವ ವೇಳೆ,
ಆತ್ಮಸಾಕ್ಷಿಗೆ ಸಾಕ್ಷಿಗುಡುತಲಿರೆ ಬಾಳೆ;
ಮೃತ್ಯುವಿನ ಹಿಡಿತ ಬಿಗಿಯಾಗುತಿರೆ, ಮೇಲೆ
ಕಿರುತಾರಗೆಯದೊಂದು ಓರಗೆಯ ಕೋರೆ,
ನಿನಗೆ ನೀನೇ, ಗೆಳೆಯ, ನಿನಗೆ ನೀನೇ!

೬

ದೂರದೂರದ ಮಾತು, ಗೀತ ಹರಿತಂದು
ಮರೆತ ಬಾಳಿನ ಕುದಿತ ಮನದಿ ನೆಲೆನಿಂದು,
ಭವದ ಬಣ್ಣದ ಗಾಜೊಳಾಗಾಗ ದಿವದ
ಸಪ್ತವರ್ಣದ ಕಾಂತಿ ಕೋರೈಸೆ ಕಣ್ಣ,
ಬಳಿಕೆಲ್ಲ ಬಾಳುದ್ದ ಕಾರಿರುಳು ಕವಿಯೆ,
ನಿನಗೆ ನೀನೇ, ಗೆಳೆಯ, ನಿನಗೆ ನೀನೇ!

೭

ಒಂಟಿಮುಗಿಲದೊ, ನೋಡು, ಬಾನ ಬಯಲಿನಲಿ
ತನ್ನೆದೆಯ ರಸದಲ್ಲಿ ತಾನೆ ಕರಕರಗಿ
ತನ್ನೆದೆಯ ಹಾಡೊಳೇ ತನ್ನ ಮೈಮರೆಸಿ
ಯಾವೆಡೆಗೆ ಸಾಗುತಿದೆ,—ಏನನಾಧರಿಸಿ?

ಆ ಹಾರುಹಕ್ಕಿಯನು ಕಂಡಿಲ್ಲವೇನು?
ಯಾವ ಮರ, ಯಾವ ಗಿಡವೆಲ್ಲಾದರೇನು?
ತನ್ನ ರೆಕ್ಕೆಯ ನಂಬುಗೆಯನೊಂದೆ ಬೆಳೆದು
ತನ್ನ ಬಾಳನು ತನ್ನ ಹಿಡಿತದಲಿ ಬಿಗಿದು
ತನ್ನ ಪಾಡನು ತಾನೆ ಹಾಡಿ ಸವಿಸವಿದು
ಸಾಗುತಿದೆಯಲ್ಲ; ಅದಕಿನ್ನಾವ ನೆಚ್ಚು?
ನಿನ್ನೆದೆಯ ಬಲವೊಂದೆ ನಿನ್ನ ಬೆಂಬಲವು;
ನಿನ್ನ ಚಿತ್ಕಳೆಯೊಂದೆ ನಿನ್ನ ಹಂಬಲವು;
ನಿನ್ನೆದೆಯ ಮಧುರಿಮೆಯೆ, ನಿನ್ನೊಲವಿನುರಿಯೆ,
ನಿನ್ನ ತ್ಯಾಗದ ಸೊಗವೆ, ರಾಗದುಬ್ಬೆಗವೆ;
ನಿನ್ನೆದೆಯನೇ ಹಿಳಿದು ಹಿಳಿದದನು ಮೆದ್ದು
(ನಿನ್ನೊಡಲ ಯಾತನೆಗೆ ಅದೆ ಹಿರಿಯ ಮದ್ದು!)
ನಿನ್ನ ಮರುಕದ ಅಗ್ನಿದಿವ್ಯದಲಿ ಗೆದ್ದು
ಮೇಲೆ ಬಾ, ಹೂವಾಗಿ, ಜೇನಾಗಿ ಪುಟಿದು,
ತೇಲಿ ಬಾ, ಬೆಳ್ಮುಗಿಲ ತುಣುಕಾಗಿ ನೆಗೆದು,
ಬಾನೆತ್ತರಕು ಜಗದ ಬಿತ್ತರಕು ಬೆಳೆದು;
ಅದೆ ಸಾಧನೆಯು, ಸಾಧ್ಯ;—ಅದೆ ಬಾಳಿನೊಸಗೆ;
ನಿನಗೆ ನೀನೇ, ಕೊನೆಗು, ನೀನೆ ನಿನಗೆ!

# ಓಡಲೆಳಸುತಿಹುದು ಜೀವ

ಓಡಲೆಳಸುತಿಹುದು ಜೀವ ದೂರ, ದೂರ, ಜನವಿದೂರ
ವಿಪಿನದೆಡೆಗೆ,
ಗಾಢಾಂಧಕಾರ ಕವಿದ ಕಗ್ಗವಿಯ ಒಡಲಿಗೆ;
ಮಿನುಗುತಾರೆ, ನಗುವ ಚಂದ್ರ,
ಕುಣಿವ ವೀಚಿಮಾಲೆಗೆ.

ನೇಹ, ಮೋಹ, ನಗುವು, ಅಳುವು ಇಲ್ಲದೊಂದು ಬೀಡಿಗೆ;
ತನ್ನತನದ ಕೋಟೆಗಿನಿಸು ಲಗ್ಗೆ ಬಾರದಿರುವೆಡೆ;
ಎದೆಯ ಹೊಳೆಗೆ ಕೊಳಕು ತೊರೆಗಳೊಂದೂ ಸೇರದಿರುವೆಡೆ—
ಓಡಲೆಳಸುತಿಹುದು ಜೀವ.

ಮೌನಶರಧಿತಳದಿ ಮುತ್ತಿನಂತೆ ಮಲಗಲೆಳಸಿದೆ;
ಗವಿಯೊಡಲಿನ ರನ್ನದಂತೆ ತನ್ನ ತಾನೆ ಬೆಳಗ ಬಯಸಿದೆ;
ಏಕಾಂತದ ಶಾಂತಿರಸಕೆ ಬಾಯಾರಿ ನಿಂತಿದೆ.

ಕಲಹ, ಕಪಟ, ಕುದಿತ, ಮಿದಿತ,
ಅಳಲು, ಅಳುವು, ಕೋಪ, ತಾಪ—
ಇವಕೆ ಇಗೋ ಹೇಸಿದೆ;
ಒಲವು, ನಲವು, ಸರಸ, ಹಾಸ,
ಮಾತುಕತೆಯು, ಆಟ, ಬೇಟ—
ಅವೂ ಬೇಸರೆನಿಸಿವೆ!

ಭಾರವಾಗುತಿಹುದು ನೇಹ, ಕೋಳವೆನಿಸುತಿಹುದು ಪ್ರೇಮ;
ಗಾಳವೆನಿಸುತಿಹುದು ಬರುವ ದಯಾದೃಷ್ಟಿಸಂಕುಲ;
ಬೆಳೆಯಲೆಳಸುತಿಹುದು ಮನವು,
ಬೆಳಗ ಬಯಸುತಿರುವುದಾತ್ಮ;

ಇಲ್ಲಿ ಬಾಳಿ, ಇಲ್ಲಿ ಬದುಕಿ,
ಮೋಹದ ಸುಳಿಯೊಳಗೆ ಸಿಲುಕಿ,
ನೇಹದ ತುಮುಲಕ್ಕೆ ಅಳುಕಿ,
ಎದೆಗೆ ಎದೆಯು ತಾಗಿ, ತಾಗಿ
ನೆಗೆವ ವಹ್ನಿ ಜ್ವಾಲೆಯಲ್ಲಿ
    ಹಿರಿಹಂಬಲನೆಲ್ಲವ,
    ಒಳ್ಗುರಿಗಳನೆಲ್ಲವ
ಸುಟ್ಟುಬಿಡಲೆ, ಕೊಟ್ಟುಬಿಡಲೆ,
ಆವಕೆ ಕೊನೆಯ ತರ್ಪಣ?

ಬಾಳ ಹೂವು ಬಾಡದಿರಲು,
ಮನದ ಆಸೆ ಅಳಿಯದಿರಲು
ಕನಸೆಲ್ಲವು ನಸುವಾದರು
ನನಸಿಗಿಳಿದು ಬರುವೊಡೆ,
ಮನದ ಆಳಕಿಳಿಯಬೇಕು ;
ಆ ಗುಹಾಂತರಾಳದಲ್ಲಿ
ತನ್ನತನದ ರನ್ನವನ್ನು ಎಂತಾದರು ಪಡೆಯಬೇಕು ;—
ಅದಕಾಗಿಯೆ,
ಓಡಲೆಳಸುತಿಹುದು ಜೀವ ದೂರದೂರಕೆ,—
ಸಣ್ಣ ಒಲವು, ಸಣ್ಣ ನೇಹ, ಸಣ್ಣ ಬಯಕೆ, ಸಣ್ಣ ಹರಕೆ—
ಇವುಗಳಿಂದ ದೂರಕೆ,—
ನೀಲಮುಗಿಲ, ಗಹನವಿಪಿನ, ಹಿರಿಗಡಲಿನ ವಿಸ್ತಾರಕೆ ;
ಓಡಲೆಳಸುತಿಹುದು ಜೀವ
ದೂರದೂರಕೆ !

# ನನ್ನ ನಿನ್ನ ಬಳುವಳಿ

೧

ಮೂಕಶೋಕವೊಂದೆ, ವಿರಹವೊಂದೆ, ಆರದಾಸರೇ
ನನ್ನ ನಿನ್ನ ಬೆಂಬಳಿ;
ಏಕಾಂತದ ಮರುಕವೊಂದೆ, ಲೋಕಾಂತದ ಮುರುಕವೊಂದೆ,
ಒಲವಿನಗ್ನಿಕುಂಡವೇ, ಒಡಲ ಕುದಿವ ಭಾಂಡವೇ,
ಕರಕುತಿರುವ ಬಾಳಿನಾಶೆಯೊಂದು ಕನಲುಕೆಂಡವೇ
ನನ್ನ ನಿನ್ನ ಬಳುವಳಿ.

೨

ಬಾಳುದ್ದವು ನವೆದರೂ,
ಭವಭವಗಳು ಸವೆದರೂ,
ಜೀವವೆದ್ದು ನೂರುಜಿದ್ದಿನಲ್ಲಿ ಬಿದ್ದು ಗೆದ್ದರೂ,
ತೀರದಂಥ ಹಂಬಲೊಂದೆ,
ಬಾರದಂಥ ಭಾಗ್ಯವೊಂದೆ,
ಮೈಮಿಾರಿದ ಮಾಯೆಯೇ,
ಕೈಮಿಾರಿದ ಛಾಯೆಯೇ
ನನ್ನ ನಿನ್ನ ಬೆಂಬಳಿ.

೩

ಸುತ್ತುತಿಹುದು ನಿನ್ನ ಸುತ್ತ ನನ್ನ ಚಿತ್ತಭೃಂಗವು ;
ಈ ಒಡಲು ಕಡಲು ವ್ಯೋಮ ಭೂಮ ನಮ್ಮ ಪ್ರೇಮರಂಗವು!
ಅಲ್ಲಿ ಸುತ್ತುಮುತ್ತು ಮುಳ್ಳು ನಡುವೆ ಒಲವು ಕುಸುಮವು;
ಅಲ್ಲಿ ನಾವು ಹೊರಳಿಯುರುಳಿ ನೆತ್ತರಲ್ಲಿ ನಾಂದರೂ,
ಹೂವಿನೊಂದು ಕಂಪೆ, ತಂಪೆ, ಸೊಂಪೆ ನಮ್ಮ ಆಸರು !

೪

ಅಲ್ಲಿ ಎಲ್ಲೊ ದಿಗ್ದಿಗಂತದಂಚಿನಂಚಿನಾಚೆಗೆ,
ಚೊಕ್ಕಚಿಕ್ಕೆಯರಳನುಟ್ಟ ನೀಲದಾಳದಾಚೆಗೆ
ಎಲ್ಲಿ ಒಲವೆ ಒಲವು ನಲವೆ ನಲವು ಎತ್ತಲೆತ್ತಲೂ
ಅಲ್ಲೆ ನಮ್ಮ ಕೂಟದೊಂದು ಕನಸಿನೊಂದು ಕಬ್ಬವು—
ಬೆಳೆಯುತಿಹುದು ನಮ್ಮ ಬಾಳಿನೊಂದು ಹಿರಿಯ ಹಬ್ಬವು!

೫

ಆದೊಡೀಚೆಗೀಚೆಗಿಲ್ಲಿ ಒಂದೆ ಒಂದೆ ಪಲ್ಲವಿ :—
ಮೂಕಶೋಕವೊಂದೆ, ವಿರಹವೊಂದೆ, ಆರದಾಸರೇ
ನನ್ನ ನಿನ್ನ ಬಳುವಳಿ!

# ಜಗವೆಲ್ಲ ಸುಳ್ಳು !

ಅವರಿಲ್ಲ, ಇವರಿಲ್ಲ, ಜಗವೆಲ್ಲ ಸುಳ್ಳು !
ನಾನು–ನೀನೆಂಬುದೊಂದೇ ನಿಜದ ಸೊಲ್ಲು ;
ನಾನು ನೀನಿರುವೆಡೆಯೆ ನಂದನಕು ಮಿಗಿಲು ;
ಅಲ್ಲಿ ನಿತ್ಯವಸಂತ, ಕೋಗಿಲೆಯ ಹುಗಿಲು !

ನಿನ್ನ ಮನವನು ಕತ್ತಲಲ್ಲಿ ಹೂಳು ;
ಮರೆತುಬಿಡು ; ಬಾಳುವೆಯು ಬರಿಯ ಗೋಳು !
ಒಲವೊಂದೆ ಬೆಸನಾಗಿ ಇಲ್ಲಿ ವೈತಾಳು ;
ನೋಡಿದೋ, ನಾಕವಾಯಿತು ನಮ್ಮ ಬಾಳು !

ಮಾತುಗಳಿಗಿಲ್ಲ ಕೊನೆ; ಇರಲಿ ಮೌನ !
ಬೇಟವಲ್ಲದೆ ಬೇರೆ ಬೇಡ ಜಾನ ;
ಒಲವಲ್ಲದೇ ಬೇರೆ ಬೇಡ ತ್ರಾಣ ;
ಒಡಲಲ್ಲದಿನ್ನೇಕೆ ಬೇರೆ ತಾಣ !

ಗಾಢವಾಗಲಿ ಇನ್ನು ಬಾಹುಬಂಧ !
ಮೂಡಿ ಮುಳುಗಲಿ ಅಲ್ಲಿ ಸೂರ್ಯಚಂದ್ರ.
ಅಮೃತವನು ಕೊಡು, ಕೊಳ್ಳು ; ಬೇಡ ಶಂಕೆ.
ನಿಶ್ಚಿಂತರಿಗೆ ಎಲ್ಲಿ ಯಾವ ಅಂಕೆ ?

ನಿನ್ನ ಕೊನೆಯಿರದ ಕತ್ತಲಿನಲ್ಲಿ ಕರಗುವೆನು,
ಇಳಿಯುವೆನು ಬಾಳಿನಾಳ ;
ಅಲ್ಲಿ ಹರಿಯದೆ ತಡೆದು ಇಡಿಯಾಗಿ ಮಡಿಯುವೆನು
ನಿರ್ಮನ, ನಿರೀಹ, ನಿಷ್ಕಾಳ !

# ಚಿಂತೆ—ಚಿತೆ

ಚಿಂತೆಚಿತೆಯುರಿಯುತಿದೆ ಎದೆಯಲ್ಲಿ; ನೂರಾರು
ಬಯಕೆಗಳ ಹಸಿಹೆಣವು ಬೇಯುತಿಹುವು;
ಹುಸಿನಗೆಯ ಹೊಸಪರದೆ ಎಳೆದುಬಿಡು, ಗೆಳೆಯ!
ಈ ನೋಟ ಜನಕಲ್ಲ; ನಿನ್ನ ಸಂತಸಕೆ!

ತನ್ನ ದಾರಿಯ ತಾನೆ ತಿಳಿಯದಿರುವೀ ಯಾತ್ರೆ,
ಕಣ್ಣಿದ್ದು ಕಾಣದೀ ಕುರುಡುತನವು,
ಎದೆಯಿದ್ದು ಕಲ್ಲಾಗಿ ಕೆಡೆವ ಕಾಠಿನ್ಯವಿದು—
ಇದಕು ಮಿಗಿಲುಂಟೆ ಸಂತಸವು?

ಮರೆತುಬಿಟ್ಟಳು ತನ್ನ ಸುಖವ, ತನ್ನೆದೆಯೊಳಗು-
ನೋವುಗಳ ಮರೆಸಿದಳು ತರಳೆ;
ನಿನ್ನ ಬಾಳದು ಹಿಗ್ಗಲೆಂದು ತನ್ನಯ ಜೀವ-
ನದಿಯ ಶೋಷಿಪಳು, ಬಾಲೆ!

ಆವಳೊಲವುನಾಡನುಳಿದಿಲ್ಲ ನೆಲೆ. ನೀರ
ನುಳಿದಿನ್ನೆಲ್ಲಿ ಪಯಣವೋ, ಮೀನ?
ಬಾನಲ್ಲದಿನ್ನಾವ ಹಕ್ಕೆ ಹುಡುಕುವೆ, ಮುಗಿಲೆ?
ಒಡಲತೊರೆದೆಲ್ಲಿರುವೆ, ಪ್ರಾಣ?

ತಪ್ಪುತಪ್ಪಯ್ಯೊ, ಅನ್ಯಾಯ, ಇದು ಕಟುಕತನ
ಎಂದು ಕೂಗುತಲಿರಲು ಹೃದಯ;
ಬೆಸೆದೆದೆಯ ಶಿಥಿಲಗೊಳಿಸಿದೆಯೇನು, ಹಾ, ಕಟುಕ!
ಎಂದು ಮಾಯುವುದಿಂಥ ಗಾಯ?

ಹುಚ್ಚಾದೆನಯ್ಯೊ, ಹೊಲ್ಲದುದನೆಸಗುವೆನಯ್ಯೊ;
ಇದೊ ಶಿಖರ, ಶಿಖರಾಗ್ರ; ಕೆಳಗೆ

ಬಿದ್ದೆ ಬೀಳುವೆ ಮಹಾಕಂದರಕೆ; ಇಲ್ಲವೋ
ಇಲ್ಲ ನಿಷ್ಕೃತಿ ನಿನ್ನ ಬಾಳ್ಗೆ !

ಬರುತಲಿದೆ ದಿನವೊಂದು ಬಾಳ ತೊಡಕಿನ ಮಾಲೆ-
ಗಿನ್ನೊಂದು ಮಣಿಯ ಪೋಣಿಸಲು ;
ವಿಧಿಯ ಬತ್ತಳಿಕೆಗಿನ್ನೊಂದು ಬಂತೋ ಬಾಣ,
ಬಾಳಗಾಣಕ್ಕೆ ಹೊಸಕಸುವು !

ಕಾಣದೋ ಕಾಣದೊಂದೂ ದಾರಿ ; ದಿಕ್ಕೆಲ್ಲ
ಬೆಳೆಯುತಿದೆ ಕತ್ತಲೆಯನೊಂದೇ.
ಯೋಚನೆಯ ಯಾಚನೆಗೆ ಭಿಕ್ಷೆ ಕಳವಳವೊಂದೆ ;
ಎಡಹುವುದೆ ನಡೆಯಾಯ್ತು, ನಿನಗೆ ?

ಕೊರಗು ; ಕೊರಗಿನ ಕುಹರದಲ್ಲಾವ ಹೊಸಬೆಳಕು
ಬರುವುದೋ ಕೊರಗಿ ನೋಡು ;
ವ್ಯಾಕುಲದ ಮೌನದಾವಿಗೆಯಲ್ಲಿ ಬೆಂದಬಳಿ-
ಕಾವ ರಸ ಬಹುದೊ, ಹಾಡು !

# ಸಖಿ, ಬಾ!

ಬಾ, ಬಾ, ಸಖಿ! ಬಾ,
ನೆನಹಿನ ನಂದನ
ವನವಿದೊ ಕುಣಿಯುತಿದೆ ;
ಇಲ್ಲಿಯೆ ಬಗೆಗಣ್ಣೆದಿರೊಳು ತನ್ನಯ
ಸೊಬಗನು ಮೆರೆಯುತಿದೆ.

ಇದೊ ನಲ್ವಾತಿನ ನಲುಮೆಯ ನನೆಗಳು
ನಲಿದಿವೆ ನಿನಗಾಗಿ ;
ಇದೆಕೋ ಬೇಟದ ಸವಿಸವಿ ಹೂಗಳು
ನಗುತಿವೆ ನಮಗಾಗಿ.
ಆನಂದದ ಕಂಬನಿಗಳ ಧುನಿಗಳು
ಚಿಮ್ಮಿವೆ ನಮ್ಮೆದಿರು ;
ಪುಳಕಪುಳಕಗಳ ಚಿಗುರಜಲ್ಲಿಗಳು
ಚೆಲ್ಲಿವೆ ಕಣ್ಣೆದಿರು ;
ಇದೊ ಮೈನಲವಿನ ಒಲವಿನ ಕೂಟದ
ಫಲಗಳು ನಮಗಾಗಿ
ಕಾದಿವೆ ; ಇಲ್ಲಿಯೆ ಸುತ್ತಲು ಸವಿಸವಿ
ಮುತ್ತಿನ ಮಾಲೆಗಳು
ಸುತ್ತಿವೆ ; ಸವಿಸವಿಯಾಲಿಂಗನಗಳ
ಕೆತ್ತಿವೆ ಚಿತ್ರಗಳು.

ಅಲ್ಲಿಯೆ ನಾನೂ ನೀನೂ ನಿಲ್ಲುವ, ಗೆಲ್ಲುವ ಒಂದೆ ಚಣ ;
ಇಂದಿನ ಬೆಂಗಾಡನು ತೊರೆ; ಮರೆ, ಹಾ, ಬಾಳಿನ ನಿಷ್ಕರುಣ !
ತುಂಬಲಿ, ತುಳುಕಲಿ, ದಡಗಳ ದುಡುಕಲಿ, ಮಗುಳೆಮ್ಮಾ ಹರಣ !

ಎದೆಯ ತೆರೆದು ಮೈತೆರೆದು ಬಾಳ ತೆರೆದಪ್ಪಿದ ದಿನಗಳನು,
ಸೋಂಕುಸೋಂಕಿನಲಿ, ಮುತ್ತುಮುತ್ತಿನಲಿ ನೆಗಳಿದ ದಿವಗಳನು,
ಇಲ್ಲಿ ನೋಡು ಎದೆಯಲ್ಲಿ ; ನೋಡಿ ಹಾ, ಬಿಡು ನಿಟ್ಟುಸಿರೊಂದ ;
ನಲವು ಕಳೆದರೂ ನಲುಗದು, ಹಾ ಪ್ರಿಯೆ, ನಮ್ಮ ಪ್ರೇಮಬಂಧ!

ಬಾರದ ದಿನಗಳ ಮಣಿಗಳ ಪೋಣಿಸು
ನೆನಹಿನ ದಾರದಲಿ;
ಒಲವಿನ ಜಪದೊಳೆ ಬಾಳುವ, ಬಾಳಿನ
ಕಾರಾಗಾರದಲಿ!

ಬಾ, ಬಾ, ಸಖಿ! ಬಾ,
ನೆನಹಿನ ನಂದನ
ವನವಿದೊ ಕರೆಯುತಿದೆ —
ಇಲ್ಲಿಯೆ, ಬಗೆಗಣ್ಣಿದಿರೊಳು ತನ್ನಯ
ಸೊಬಗನು ತೆರೆಯುತಿದೆ!

# ಪ್ರೀತಿ

ಕಾಮದ ಕೆಸರಿಂದ ಹುಟ್ಟಿ
ಬಂತು ಎಂಥ ವಿಮಲವು,
ಪ್ರೀತಿಯೆಂಬ ಕಮಲವು !

ಗಾಳಿಯೊಡನೆ ಕೂಡಿಯಾಡಿ
ಜೇನುಹಾಡುಗಳನು ಹಾಡಿ,
ಗಾನದಲೆಯು ಕೆರಳಿಸಿ
ದುಂಬಿದುಂಬಿಯೆದೆಯುಲಿ ;
ಮೇಲೆ ಮತ್ತೆ ಬಾನಿನತ್ತ
ನೋಡಿ ಕಮಲವಾಯ್ತು ಮತ್ತ ;
“ ನನ್ನ ನಾಡು ಬಾನು ದಿಟ ;
ನನ್ನ ನೆಲೆಯು ಮುಗಿಲ ತಟ ;
ಸಾಕು ಕೆಸರು–ಕೊಳೆ–ಸಂಕಟ.”
ಎಂದು ಕುಣಿದುದದು ಧಿಂಕಿಟ.

ಕುಣಿದು ಕುಣಿದು ಕೆಸರ ಬಿಟ್ಟು
ಮೇಲೆ ಬಂತು ಕಮಲವು !
ಬಾಡಿ ಬಿಸಿಲಿನುರಿಗೆ ಸುಟ್ಟು
ಬತ್ತಿಹೋಯ್ತು ಕಾಯವು.
ಗಾಳಿ ಸರಸವಾಡಲಿಲ್ಲ ;
ದುಂಬಿಯೊಲವನುಲಿಯಲಿಲ್ಲ ;
ದೂರಬಾನಿನುರಿವ ಕಣ್ಣು
ತಂಪನೊಸೆದು ನೀಡಲಿಲ್ಲ !

ಗಂಧವಿಲ್ಲ, ಚಂದವಿಲ್ಲ,
ಕಮಲ ಬರಿಯ ಕಾಷ್ಠವು.
ಕೆಸರಿಲ್ಲದೆ ಕಮಲವುಂಟೆ ?
ಎಂದುದಖಿಲಸೃಷ್ಟಿಯು !

# ಇದು ಬಾಳು !

೧

ಅಳುವ ಕಡಲೊಳೂ ತೇಲಿ ಬರುತಲಿದೆ
ನಗೆಯ ಹಾಯಿದೋಣಿ ;
ಬಾಳ ಗಂಗೆಯ ಮಹಾಪೂರದೊಳೂ
ಸಾವಿನೊಂದು ವೇಣಿ
ನೆರೆತಿದೆ, ಬೆರೆತಿದೆ ; ಕುಣಿವ ಮೊರೆವ
ತೆರೆತೆರೆಗಳೋಳಿಯಲ್ಲಿ
ಜನನಮರಣಗಳ ಉಬ್ಬುತಗ್ಗು ಹೊರ
ಳುರುಳುವಾಟವಲ್ಲಿ !

೨

ಆಶೆಬೂದಿತಳದಲ್ಲು ಕೆರಳುತಿವೆ
ಕಿಡಿಗಳೆನಿತೊ ಮರಳಿ,
ಮುರಿದು ಬಿದ್ದ ಮನಮರದ ಕೊರಡೊಳೂ
ಹೂವು ಹೂವು ಅರಳಿ !
ಕೂಡಲಾರದೆದೆಯಾಳದಲ್ಲು ಕಂ-
ಡೀತು ಏಕಸೂತ್ರ;
ಕಂಡುದುಂಟು ಬೆಸೆದೆದೆಗಳಲ್ಲು ಭಿ-
ನ್ನತೆಯ ವಿಕಟಹಾಸ್ಯ !

೩

ಎತ್ತರೆತ್ತರಕೆ ಏರುವ ಮನಕೂ
ಕೆಸರ ಲೇಪ, ಲೇಪ ;
ಕೊಳೆಯ ಕೊಳಚೆಯಲಿ ಮುಳುಗಿ ಕಂಡನೋ
ಬಾನಿನೊಂದು ಪೆಂಪ ;
ತುಂಬುಗತ್ತಲಿನ ಬಸಿರನಾಳುತಿದೆ
ಒಂದು ಅಗ್ನಿಪಿಂಡ ;
ತಮದಗಾಧಹೊನಲಲ್ಲು ಹೊಳೆಯುತಿದೆ
ಸತ್ವವೊಂದಖಂಡ !

೪

ಇದನರಿತೆನೆಂದೆ ; ಆ ಅರಿವುಕಿರಣವನೆ
ನುಂಗಿತೊಂದು ಮೇಘ;
ಆ ಮುಗಿಲ ಬಸಿರನೇ ಬಗೆದುಬಂತು ನವ
ಕಿರಣವೊಂದಮೋಘ!
ಹಿಡಿದ ಹೊನ್ನೆ ಮಣ್ಣಹುದು; ಮಣ್ಣೊಳೂ
ಹೊಳೆದುಂಟು ಹೊನ್ನು ;
ಇದು ಹೀಗೆ ಎಂಬ ನಂಬುಗೆಯ ಊರೆಗೋ-
ಲಿಲ್ಲ ಇನ್ನು, ಮುನ್ನು !

೫

ಆಶೆಯೆಂಬ ತಳವೊಡೆದ ದೋಣಿಯಲಿ
ದೂರತೀರಯಾನ ;
ಯಾರ ಲೀಲೆಗೋ ಯಾರೊ ಏನೊ ಗುರಿ-
ಯಿರದೆ ಬಿಟ್ಟಬಾಣ !
ಇದು ಬಾಳು ನೋಡು ; ಇದ ತಿಳಿದೆನೆಂದರೂ
ತಿಳಿದ ಧೀರನಿಲ್ಲ;
ಹಲವುತನದ ಮೈಮರೆಸುವಾಟವಿದು ;
ನಿಜವು ತೋರದಲ್ಲ !
ಬೆಂಗಾಡು ನೋಡು ಇದು ; ಕಾಂಬ ಬಯಲುದೊರೆ-
ಗಿಲ್ಲ ಆದಿ-ಅಂತ್ಯ;
ಅದ ಕುಡಿದೆನೆಂದ ಹಲರುಂಟು ; ತಣಿದೆನೆಂ-
ದವರ ಕಾಣೆನಯ್ಯ !
ಅರೆಬೆಳಕಿನಲ್ಲಿ ಬಾಳಲ್ಲಿ ಸುತ್ತಿ ನಾ
ವೇಕೊ ಮಲೆತು, ಮೆರೆದು,
ಕೊನೆಗೆ ಕರಗುವೆವು ಮರಣತೀರಘನ
ತಿಮಿರದಲ್ಲಿ ಬೆರೆದು !

# ಬಿಡುಗಡೆಯ ಹಾಡು !

೧

ಇಂದು ನನ್ನ ಬಿಡುಗಡೆ,
ಇಲ್ಲೆ ನನ್ನ ನಿಲುಗಡೆ ;
ಇನ್ನು ಇಲ್ಲ ಹರಿತ, ಕೊರೆತ,
ಇಲ್ಲವೋ ಪ್ರವಾಹವು ;
ಇಲ್ಲವಯ್ಯ ಕಡಲ ಕುಡಿದು
ತೀರದಂಥ ದಾಹವು !
ಇಲ್ಲೆ ಹೊನಲ ನಿಲುಗಡೆ ;
ಇಂದು ನನ್ನ ಬಿಡುಗಡೆ !

೨

ಒಲವಿನಿಂದ, ಚೆಲುವಿನಿಂದ
ನಲವಿನ ನೆಳಲಿಂದಲೂನು
ಇಂದು ನನ್ನ ಬಿಡುಗಡೆ ;
ಇದೋ ನೋಡಿ ನನ್ನೆಡೆ !
ಬಿಡುವು, ಬಿಡುವು,
ತೆರವು, ತೆರವು,
ಸ್ವಚ್ಛಂದ, ಸ್ವಚ್ಛಂದ,
ಸ್ವೈರ, ಸ್ವೈರವು
ನನ್ನ ಜೀವವು !
ಇಲ್ಲಿ ಇಲ್ಲ ಪ್ರೇಮ, ಅಹಾ,
ಇಲ್ಲಿ ಇಲ್ಲ ವೈರವು,
ಮನವು ನಿರ್ವಿಕಾರವು !

೩

ಆಶೆಗಿಲ್ಲ ಇನ್ನು ಜನನ,
ಚಿಂತೆಗಿಲ್ಲ ಇಂಧನ ;

ಒಡೆವ ಬಾಳ ಹಿಡಿದು ನಿಂತ
  ಹೂವಿನಂಥ ಬಂಧನ
ಬಿಡುತಲಿಹುವು ಈ ದಿನ!
ಸರಸಹೃದಯಚಂದನ
  ಇದೋ ಕಾದ ಕಬ್ಬಿಣ;
ಮಸಣಯಾತ್ರೆಯಾದುದಯ್ಯ
  ನನ್ನ ಬಾಳ ದಿಬ್ಬಣ!
ಮನದ ವಿವೃತಪಾತಾಳ
  ದಾಳದಿಂದ ಕಾವಳ
ಏಳುತಿದೆ, ಹೂಳುತಿದೆ
  ಭಾವ ಭಾವವ;
ತಂಗುತಿದೆ, ನುಂಗುತಿದೆ
  ಜೀವ ಜೀವವ!

೪

ಇಂದು ನನಗೆ ಬಿಡುಗಡೆ;
  ಶರಧಿಯುಲಿವ ನಾವಿಕನಿಗೆ
ದೋಣಿಯಿಂದ ಬಿಡುಗಡೆ;
  ಸರದಿ ನಲಿವ ನೈದಿಲೆಗೆ
ನೀರಿನಿಂದ ಬಿಡುಗಡೆ;
  ಸೊಗದ ಕೋಡುಗಲ್ಲಿನಿಂದ
ಕೆಳಗೆ ಕಣಿವೆಯಾಳಕೆ,
  ಕನಸು ಸಮೆದ ಕಾಮನಂಬಿ
  ನಿಂದ ಪಾತಾಳಕೆ
  ಇಂದು ನನ್ನ ಬಿಡುಗಡೆ;
  ಅಹಹಾ, ಇದೆಂಥ ಬಿಡುಗಡೆ!

೫

ಇನ್ನು ಮೇಲೆ ನನ್ನ ಹಾಡಿಗಿಲ್ಲವಯ್ಯ ತಾಳಲಯ ;
ನಾ ನಿರಾಮಯ ;
ಇನ್ನು ಒಲವಿನಂಕೆ ಶಂಕೆ ಇಲ್ಲ ತವಕ, ಅನುನಯ ;
ಹೃದಯ ನಿರ್ಭಯ !
ಗಾಳಿಯೊಡನೆ ಗುರಿಯಿಲ್ಲದೆ ತಿರುಗುವಣ್ಣ ತರಗೆಲೆ,
ತೂಗು ನಿನ್ನ ಹೊಂದಲೆ ;
ಇನ್ನು ನಾನು ನಿನ್ನೊಲೆ !
ನೆಲೆಯಿಲ್ಲದೆ ಬಾನಿನಲ್ಲಿ ತಿರಿವ ಮುಗಿಲ ತುರುಗಲೇ,
ಗುಡುಗುಹಾಡಿರೊಮ್ಮೆಲೆ,
ನಾನು ನಿಮ್ಮ ಬೆನ್ನೊಳೇ !
ಎಲೆಲೆ ಕಲ್ಲೆ ! ನಿನ್ನ ಕಲ್ಮೆ, ಬಲ್ಮೆ ನನ್ನದಾಗಲೀ ;
ಮನವು ಅಂತೆ ಮಾಗಲೀ !
ಗಿರಿಯೆ, ತರುವೆ, ಹೊನಲೆ, ಹುಲ್ಲೆ ! ನಿಮ್ಮ ಕೆಳೆಯ ಹೊಲದಲಿ
ನನ್ನ ಬಾಳು ಬಲಿಯಲಿ !
ನಿಮ್ಮೊಳಿಲ್ಲ ಒಲವಿನಂಬು, ದಯೆಯ ನಂಜುಜಂಭವು,
ರೂಪವಿಷದ ಕುಂಭವು !
ಮನದ ಹುಣ್ಣು ಕೆದಕದೆಯೆ, ನೆನಪಿನುರಿಯ ಕೆರಳಿಸದೆಯೆ
ನೀವು ತಂಪನೆರೆಯಿರಿ !
ಇಂದು ನನ್ನ ಕೂಡ ನನ್ನ ಕೆಳೆಯರಿರಾ ನಲಿಯಿರಿ,
ನನ್ನ ಹಾಡ ಹಾಡಿರಿ ;
ಇದೋ ನನ್ನ ಹಾಡಿದೇ :
'ಇಂದು ನನ್ನ ಬಿಡುಗಡೆ !'

೬

ನನ್ನೆದೆಯನು ನಾನೆ ಹಿಳಿದು ಕುಡಿದು ಅದರ ರಸವನು
ಪ್ರೇಮವೆಂದು ಮೊರೆದೆನು ;
ನನ್ನ ಒಲವುಕಾವಿನಿಂದ ಬೆಸೆದೆನೊಂದು ರೂಹನು,
ನಲ್ಲೆಯೆಂದು ಕರೆದೆನು !

ಒಲವೆಯೆಂದು ನಲವೆಯೆಂದು ನಾವು ಹುಸಿಯ ಮುಸುಕನು
ತೊಡಿಸಿ ನಿಜಕೆ ಮರೆವೆವು ;
ಒಲವು ಸುಳ್ಳು, ನಲವು ಜಳ್ಳು ; ನಮ್ಮ ನಾವೆ ವಂಚಿಸುವೆವು ;
ಇಲ್ಲದುದನೆ ಹೊರೆವೆವು !
ನಾನೆ ನನ್ನ ನಲ್ಲೆ ನಲ್ಲ ನಲುಮೆ ಒಲುಮೆ ಸಂಭ್ರಮು,
ಉಳಿದುದೆಲ್ಲ ವಿಭ್ರಮು !

೭

ಮರೆತುಬಿಡೆಲೊ ಮಗುವೆ, ನಿನ್ನ ಒಲವಿನಂಗಭಂಗವ ;
ತೆರೆಯೊ ಅಂತರಂಗವ !
ಅಲ್ಲಿ ಹುಡುಕು ಕಳಚಿ ಬಿದ್ದ ನಿನ್ನ ಜೀವರತ್ನವ,
ತನ್ನತನದ ಸತ್ವವ !
ಸಿಕ್ಕಬಹುದು, ಸಿಕ್ಕದಿದ್ದರೇನು ? ಹುಡುಕುವಾಟವೇ,
ಅದರ ದಿವ್ಯಪಾಠವೇ
ಎದೆಗೆ ಬಲವ, ಮತಿಗೆ ಧೃತಿಯ, ಬಾಳಿಗೊಂದು ಶಾಂತಿಯ
ನೀಡಬಹುದು ಕಾಂತಿಯ !
ಅಂತೆಯೇನೊ ಬಂದಿತೇನೊ ಇಂದು ನಿನ್ನ ಬಿಡುಗಡೆ,
ಹಾಡು, ಹಾಡು, ದಣಿಯದೆ :
' ಇಂದು ನನ್ನ ಬಿಡುಗಡೆ ! '

# ಯುದ್ಧ ಮುಗಿಯಿತು !

ಯುದ್ಧ ಮುಗಿಯಿತು, ಮುಗಿಯಿತಹಹ ನರಮೇಧ ! ಮುಗಿ
ಲುದ್ದ ಹಿಂಸಾರತಿಯ ಕೆಸರು ಚಿಮ್ಮಿ
ಹೊಲೆಯಾದ ನೆಲದೆದೆಯ, ಬಾನ ಕರುಣಾಮುಖದ
ಕೊಳೆಯ ತೊಳೆತೊಳೆಯ ಬಹುದಂತೆ, ಶಾಂತಿ!

ಕೆನ್ನೀರ ಕಾಲುವೆಗೆ ಬಿದ್ದು ಸಾವಿನ ತಡಿಗೆ
ಕೊಚ್ಚಿ ಹೋಗಿಹ ಕೋಟಿಕೋಟಿ ಜನರ
ಎದೆಯನಾಧರಿಸಿ ನಿಂತೊಲವಣುಗುನೇಹಗಳು
ನೆಲೆದಪ್ಪಿ ತೊಳಲುತಿರೆ ಇದೊ ಅನಾಥ,
ವಿಜಯದೊಂದೊಂದು ನುಡಿಯೊಳು ಮಡಿದ ನೂರು ಜನ-
ದೊಡಲ ಮಿಡುಕೊಂದೆ ಪಡಿನುಡಿಯುತಿಹುದು ;
ಆ ಭಯಂಕರ ರುದ್ರನಾಟ್ಯವಾದೀ ಬಳಿಕ
ಈ ಒಸಗೆಯುಪಹಾಸ್ಯ ಸಾಕು, ಸಾಕು !

ಮುಗಿದುದೋ ನರಮೇಧ, ಕೊಲುವ ಕೈ ದಣಿದುದೋ
ರಕ್ತದಾಹವೆ ಕೊಂಚ ತಣಿಯಿತೇನೋ ;
ಬಿದ್ದವರ ಎದೆಯನೊದ್ದೊದ್ದು ನಿಂತೀ ಬಲವು
ಗೆದ್ದೆನೆಂದಿತು, ಬಲವೆ ನ್ಯಾಯವೇನೋ !

ನರನ ಹಗೆಬಗೆಯ ಕಾಳೋರಗದ ವಿಷದಂತ
ಉಗುಳುಗುಳಿ ವಿಷವ ಬರಿದಾಯಿತಯ್ಯ ;
ಶಾಂತಿಯಿದು ಆ ಕಾಳನಾಗರನ ಸುಖನಿದ್ರೆ,
ವಿಷಸಂಗ್ರಹಕೆ ಸಲುವ ಸಮಯವಕಟ !
ಮತ್ತೆ ಹೆಡೆಯೆತ್ತಲಿದೆ ; ಮತ್ತೆ ಭೋರ್ಗರೆಯಲಿದೆ;
ಮತ್ತೆ ಮತ್ತದರ ವಿಷದಂಶದಿಂದ
ಸುಟ್ಟು ಹೋಗುವುದಯ್ಯೊ ನರನ ಸಂಸ್ಕೃತಿ ; ದಿಕ್ಕು

ಗೆಟ್ಟು ನೋಡುವುದಜ್ಞಮನುಜವೃಂದ!
ಆ ಹಲ್ಲ ಕಿತ್ತೊಗೆದು ಕುಟ್ಟಿ ಪುಡಿಮಾಡಿ ಪಾ-
ತಾಳದಾಳಕ್ಕೊತ್ತಿ ಹುಗಿಯುವನಕ
ದಶಶಿರನ ತಲೆಯಂತೆ ಮರಮರಳಿ ಚಿಗುರಲಿದೆ
ಯುದ್ಧ; ಶಾಂತಿಯು ಬರಿಯ ಮಾತು ಮಾತ್ರ!

ಅನ್ಯಾಯರಾಕ್ಷಸನು ಮಾಯಕವ ಮಸಗುವನು,
ಶಾಂತಿದೇವತೆಯೆಂದು ನಟಿಸಬಹನು;
ಚೆಲುವೊಡಲ, ಸವಿನುಡಿಯ, ಬಗೆಬಗೆಯ ಸಿಂಗರದ
ಭಂಗಿಯಲಿ ಮನುಕುಲವ ಹಂಗಿಸುವನು!
ಸಾಮ್ರಾಜ್ಯತೃಷ್ಣೆ ನವವೇಷಧಾರಿಣಿಯಾಗಿ
ಆಶ್ವೇತರೆದೆಮೆಟ್ಟಿ ಕುಣಿಯ ಬಹಳು;
ಸುಲಿವ ರೀತಿ ಸುಧಾರಿಸೀತು, ನಯವಾಗಿ ನವು
ರಾಗಿ ನೆಗಳೀತದರ ಜಿಗಳೆಯೊಲವು!

ಭಾರತದ ಶೃಂಖಲೆಯ ಝಣಝಣತ್ಕಾರವೇ
ವಿಜಯೋತ್ಸವಕೆ ಸಮೆದ ಹಿಮ್ಮೇಳವು;
ವಂಗದಲಿ ಕೂಳಿಲ್ಲದಳಿದ ಅಳಿಯುತ್ತಿರುವ
ಕಂಕಾಲಗಳೆ ಅದಕೆ ಮೇಳದವರು!
ಯುದ್ಧ ಮುಗಿಯಿತೆ? ಇಲ್ಲ, ಇಲ್ಲ! ಮೊದಲಾಗಲಿದೆ
ದಲಿತಜನಪದಗಳುದ್ಧರಣಕಾರ್ಯ;
ಮೆರೆಯಲಿದೆ ಸ್ವಾತಂತ್ರ್ಯಸಮರ ಘನಘೋರ; ಅದೊ
ಕೇಳು! ಕೇಳಿಸದೆ, ಆ ಸಮರತೂರ್ಯ?

# ಏನಿರಬಹುದು ?

ಏನಿರಬಹುದಹೊ, ಏನಿರಬಹುದಹೊ,
ಏನಡಗಿರಬಹುದು ?
ಒಳಗೆ, ಒಳಗೆ, ಒಳಗೆ—ನನ್ನೀ—ಮನದ ಕಾಳದೊಳಗೆ;
ಅಂತರಂಗದ ಅನಂತವಾರಿನಿಧಿಯಂತರಾಳದೊಳಗೆ !

ಮುತ್ತುರತುನಗಳೊ, ಹೊನ್ನಿನೆಸಳುಗಳೊ, ಬರಿಯ ಕೆಸರೊ, ಕೆಸರೊ;
ಜನ್ಮಜನ್ಮದ ಜಘನ್ಯಧನ್ಯಭಾವಗಳ ಹುಚ್ಚುಹಸರೊ ;
ಬೆಳಕುಬಿತ್ತುಗಳು ಭವಕೆ ಬಳಲಿ ಬಂದಿಲ್ಲಿ ಪವಡಿಸಿಹುವೋ,
ಮಿಂಚುಬಳ್ಳಿಗಳ ಅರಳುಮೊಗ್ಗೆ ಸಾಲಾಗಿ ಹೊಂಚುತಿಹುವೋ,
ಚಂದ್ರ, ಸೂರ್ಯ, ಗ್ರಹ, ತಾರೆ ತೊಟ್ಟಿಲಲಿ ಇಲ್ಲಿ ಪಟ್ಟಿರುವುವೋ,
ಅಂಧಕಾರದ ಗಭೀರಶೂನ್ಯ ತಳವಿರದೆ ಮೊರೆಯುತಿಹುದೋ ;
ಫಲಿಸದಾಸೆಗಳ, ಬಳಸದಳಿವುಗಳ ಮೂಲಬಿಂಬವೆಲ್ಲ
ನಂಬಿ ಕುಳಿತುವೋ ಇಲ್ಲಿ ಯುಗಯುಗದ ಒಲವು ಬೇನೆಯೆಲ್ಲ,
ಎಂದೋ ಬರುವುದೆಂದು ಗೆಲ್ಲ !

ಕಪ್ಪುಕಪ್ಪುಕಡಲಿದರ ತಡಿಯೆ ನಾ ನಿಂತು ನೋಡುತಿಹೆನು ;
ಬೆಪ್ಪನಂತೆ ಅಲ್ಲಲ್ಲೆ ನಿಂತು ತಲ್ಲಣಿಸಿ ಕೋಡುತಿಹೆನು ;
ತೆರೆತೆರೆಯ ಘೋರವನು ಕಂಡೆ, ಕಂಡೆ ; ಕತ್ತಲೆಯ ತಿರುಳನುಂಡೆ ;
ಅಲ್ಲಿ ಮೊಳೆವ ಮಳೆಬಿಲ್ಲ ಮಾಟಕೇ ಮನವ ಮಾರಿಕೊಂಡೆ ;
ನನ್ನ ಯು ಬಗೆಯ ತೂರಿಕೊಂಡೆ.

ಅಂತೆ ಅಂತೆ ಅಲ್ಲಲ್ಲೆ ಆಗಲೇ ಕೆರಳುತಿತ್ತು ಕುತುಕ ;
ಎಂತೊ ಏನೊ ಅದರಾಳವೇನೊ ಅದ ತಿಳಿದುಕೊಂಬ ತನಕ
ಇಲ್ಲ ದಾಂತಿ, ನಸುವಿಲ್ಲ ಶಾಂತಿ ; ಹಸುರಿಲ್ಲ ಬಾಳಿನಲ್ಲಿ.
ಇಳಿವೆನೆಂದು ಎಂದೇ—ನನ್ನೀ—ಬಾಳ ಹಂಬಲೊಂದೆ !
ಇಳಿವ ಮೊದಲು ಅದರಾಳ—ಅಹಹ – ಅದರಾಳ ತಿಳಿವೆನೆಂದೆ ;
ಕಣ್ಣನಲ್ಲಿ ಅತ್ತಿತ್ತ ಮೇಲೆಕೆಳಗೆನಿತೊ ಸಲವೊ ಅಲೆದೆ ;

ಇಣಿಕಿ ಇಣಿಕಿ ನೋಡಿದೆನು ನನ್ನೊಳೇ ಅಳಿದೆನಯ್ಯ, ಅಳಿದೆ!
ಆಳ, ಆಳ, ಆಳ!—ಇದು ತಳ
ಕಾಣದ ಪಾತಾಳ!

ಬೆದರಿ ಬೆದರಿ ಮುದುಮುದುರಿ ದಡವ ಬಿಟ್ಟೋಡಿ ಬಂದೆ ಹೊರಗೆ;
ಆದರಾವುದೋ ಸೆಳೆತ ಎಳೆಯುತಿದೆ ನನ್ನ ತನ್ನ ತಡಿಗೆ!
ಜಗದ ಚೆಲುವು, ಮೊಗಮೊಗದ ಒಲವು, ಹಾ, ತಡೆಯದಲ್ಲ ನನ್ನ!
ಓ, ಮುಳುಗಬೇಕು, ಮುಳುಮುಳುಗಬೇಕು, ಆ ತಳವು ಕಾಣುವನ್ನ,
—ಮುಳುಗಿದ ಒಡವೆ ದೊರೆಯುವನ್ನ!

# ನೆನೆ, ನೆನೆ, ಆ ದಿನವ!

(ಆಗಸ್ಟ್ ಒಂಭತ್ತು)

ನೆನೆ, ನೆನೆ, ಆ ದಿನವ;
ಓ, ಭಾರತಬಾಂಧವ!
ನೆನೆ, ನೆನೆಯೋ, ಆ ದಿನವ!

ಭಾರತಭೂಮಿಯ ಬೀರಸಿರಿಯ ಹಿಂ-
ದಿಲ್ಲದ ವೈಭವವ;
ಭೀರುಭೀರುಗಳೆ ವೀರಧೀರರಾ
ದಂಥ ಪುಣ್ಯದಿನವ;
ಘೋರದಮನ ದಳ್ಳುರಿಯೆ ಕೂಡ ನಿ-
ಶ್ಚಿಂತ ನಿಂತ ಜನವ;
ನಿಂತು ನಿಂತು ಸ್ವಾತಂತ್ರ್ಯಛಲಕೆ ಬಲಿ
ಯಾದ ವೀರಗಣವ!
ನೆನೆ, ನೆನೆಯೋ, ಆ ದಿನವ!

ಅಂದು ಆವ ಸೆಲೆಯೊಡೆದುದೇನೊ ಹೊರ
ಹೊಮ್ಮಿ ಚಿಮ್ಮಿ ಚಿಗಿದು
ಉರುಳಿ, ಉರುಳಿ, ಹೊರಹೊರಳಿ ಬಂತು ಮೊರೆ
ಮೊರೆದು ಬಂತು ಹೊನಲು;
ಹೊಸಹೊನಲು ಬಂತು ನಾಡಿನಲಿ ದಡವ ದುಡು
ದುಡುಕಿ ಬಂತು, ಬಂತು;
ಜನಜನದ ಧಮನಿಧಮನಿಯಲಿ ನಿಂತು ಧುಮು
ಧುಮಿಸಿ ಬಂತು, ಬಂತು!

ಬೆಟ್ಟದಷ್ಟು ಬೆಳೆದೆದ್ದುನಿಂತ ಮಳಲೊಟ್ಟಲೆಲ್ಲ ಕರಗಿ,
ಕೊಳೆಕಸವ ಕೊಚ್ಚಿ ಪೊರೆಪೊರೆಯ ಬಿಚ್ಚಿ ಎಲ್ಲೆಲ್ಲು ತಾಗಿ, ತುರುಗಿ
ಬಂದು ಬಂದು ತಡೆತಡೆವ ದಿಣ್ಣೆಗಳನಿಕ್ಕಿ ನುಂಗಿ ನೆಗೆದು
ಭೋರ್ಗರೆದುದಹಹ ನಾಡಿನಲಿ ನಾಡಿನಾಡಿಯಲಿ ನಿಂತು ಮೊರೆದು!

ಅರಸುತನದ ನೂರಾರು ಕೈಗಳೋಡಿದುವು ಮಿಂಚಿನಂತೆ;
ಘೋರಶಾಸನದ ಜಾಲ ಮುಸಗಿತೋ ಇಂದ್ರಜಾಲದಂತೆ;
ನೆಲವೆ ಬಾಯಿಬಿಟ್ಟಂತೆ ತೆರೆದ ಸೆರೆಮನೆಯ ನರಕಲೋಕ
ನುಂಗಿತೊಂದೆ ತುತ್ತಾಗಿ ನಮ್ಮ ಕಣ್ಣಾಗಿ ನಿಂತ ಜನವ!

ಹಿಂದೆಗೆಯಲಿಲ್ಲ, ತಲೆಬಾಗಲಿಲ್ಲ; ಎದೆಗೆಟ್ಟುದಿಲ್ಲ ಜನತೆ;
ಅಧಿಕಾರಬಲದ ಮದಗಜದ ತುಳಿತಕೂ ಎದೆಯನೊಡ್ಡಿ ನಗುತೆ
ನಿಂತ ನಿಲುವೆ, ಬಲಿಬಿದ್ದ ಗೆಲುವೆ, ನುಚ್ಚಾದ ನೋವೆ, ನಲವೆ
ಹೊಸದಾಯ್ತು ಜಗಕೆ, ಸ್ವಾತಂತ್ರ್ಯಯುಗಕೆ; ಹೆಸರಾಯ್ತು ಭರತಕುಲಕೆ!
'ತೊಲಗು ತೊಲಗು ತೊಲಗಾಚೆ ತೊಲಗು! ಬಿಳಿದೊಗಲ ಸುಲಿಗೆಗಾರ!
ನಾವಲ್ಲ ತೊತ್ತು, ನಿನಗಲ್ಲ ತುತ್ತು ನಮ್ಮಾಸೆ, ನುಡಿ, ವಿಚಾರ;
ಇಂದು ನಾವು ಮನಸಾ ಸ್ವತಂತ್ರರೋ; ನಮ್ಮ ದೇಹಯಂತ್ರ
ನಿನ್ನ ಬೆಸಕೆ ಸಂಚಲಿಸದಣ್ಣ, ಹೋ!' ಎಂಬ ವೀರಮಂತ್ರ
ಹೆಣ್ಣುಗಂಡುಗಳ, ಕೂಸುಕುನ್ನಿಗಳ ಕೊರಳಿನಲ್ಲಿ ಕೆರಳಿ
ದಿಗ್ದಿಗಂತದಲಿ ಮೊಳಗಿ ಮೊಳಗಿ ಮಾರ್ಮಲೆದುದಭ್ರದಲ್ಲಿ!

ಇಲ್ಲ ಪಡೆವಳರು, ಇಲ್ಲ ನಡೆಸುವಾಳಿಲ್ಲಿ; ಪಡೆ ಅತಂತ್ರ!
ನ್ಯಾಯದೊಂದೆ ಛಲ, ಹೃದಯದೊಂದೆ ಬಲ, ಬೀರವೊಂದೆ ಮಂತ್ರ!
ಸುತ್ತುಮುತ್ತು ದಮನಾಬ್ಧಿವೀಚಿ ಮುಗಿಲುದ್ದ ಎದ್ದು ಬಡಿಯೆ
ತೇಲಾಡಿತಹಹ ಜನಯುದ್ಧನೌಕೆ ಸ್ವಾತಂತ್ರ್ಯತೀರದೆಡೆಗೆ!

ಬಂತು ಸೋಲು; ಬಹುದೆಂದು ಸೋಲು ಹಿಂದೆಗೆಯದಿದ್ದ ಛಲಕೆ,
ಮನೆಯ ಮರೆತು ನಿಜತನುವ ಮರೆತು ಹೋರಾಡಿದಾತ್ಮಬಲಕೆ,
ಸೆರೆಯ ನರಕದಲಿ ನರಳಿ, ನರಳಿ, ನುಗ್ಗಾದ ವೀರದಳಕೆ,
'ನಮಃ' ಎಂದು ತಲೆಬಾಗಿರಣ್ಣ ತಲೆಬಾಗದಿದ್ದ ಜನಕೆ!

ಉರಿದ ಮನಗಳನು, ಮುರಿದ ಮನೆಗಳನು, ತೊರೆದ ಒಲವುಗಳನು,
ಬಸಿದ ನೆತ್ತರನು, ಹಸಿದು ಸತ್ತರನು, ಹರಿದ ನೇಹಗಳನು,
ಅಳಿದ ಆಶೆಗಳ, ಕಳೆದ ಕಾವುಗಳ, ಬೆಳೆದ ಬಳಲಿಕೆಗಳ,
ನೆನೆಯಬೇಕು ಮರೆಯಾದ ಭಾರತದ ವೀರಚೇತನಗಳ!

ನಿನ್ನ ಮನದ ಬಯಲಲ್ಲಿ ಕಟ್ಟು ಗೋ-
ರಿಗಳ ಸಾಲುಗಳನು,
ಅಳಿದಣ್ಣ ತಮ್ಮ ನಮ್ಮಕ್ಕತಂಗಿಯರ
ವೀರಸ್ಮಾರಕವನು.
ಆ ದಿನದ ದಿವ್ಯಆದರ್ಶದರ್ಶನಕೆ
ದೀಪ್ತವಾದ ಮನವು
ಸ್ವಾಧೀನಭಾವನೆಯ ಸಂತತಾಗ್ನಿಯಂ-
ತಾಗಿ ಶೋಭಿಸಿರಲು,
ಧುಮುಧುಮುಕಿ ಬರಲಿ ದೇಶಾಭಿಮಾನ
ದುನ್ಮಾದದಮೃತಪೂರ
ಬಳಿಸಾರುವಂತೆ, ತೆರೆತೆರೆಯುವಂತೆ ಸ್ವಾ-
ತಂತ್ರ್ಯ ದಿವ್ಯತೀರ!

ನೆನೆ, ನೆನೆ, ಆ ದಿನವ,
ಓ, ಭಾರತ ಬಾಂಧವ!
ನೆನೆ, ನೆನೆಯೋ, ಆ ದಿನವ!

# ಒಳತೋಟಿ

೧

ನಿಮಿಷ ನಿಮಿಷಕ್ಕೊಂದು ವ್ಯೂಹಾಂತರವ ತಂದು
ದಾಳಿಡುವ ಸಮವಿಷಮಭಾವಗಳಲಿ
ಹೋಳಾಗುತಿರೆ ಬಾಳು ಗೋಳಿಡುತಿರುವ ಮಧುರ
ನೊಳತೋಟಿ ಹಾಡಾಗಿ ಹರಿವುದಿಲ್ಲಿ.—

ಹುಟ್ಟಿದನು ಪಡುಗಡಲ ತಡಿಯ ಕನ್ನಡನಾಡ
ಕಣ್ಣ ಮಣಿಯೆನಿಪ ಭೂನಂದನದಲಿ;
ತೆಂಗುಕಂಗುಗಳ ಕೆರೆತೊರೆಕಾವಣಂಗಳ ವಿ
ಹಂಗಭೃಂಗಗಳಮಳಸಂಗಮದಲಿ.

ಒಂದೆ ಗಾವುದ ದೂರ ಮೊರೆದಪುದು ಪಡುಗಡಲು
ಬಂಧನದ ಬಾಳುವೆಗೆ ನೊಂದು ಬೆಂದು,
ಹೊಸ ಹಾದಿಯನು ಹಿಡಿದು ನಡೆವ ವಿಫಲಾಕಾಂಕ್ಷೆ
ಯುಗಯುಗಗಳಿಂದೆದೆಯ ಮಿದಿಯುತಿರಲು.

ಕುದಿಕುದಿಯುವೊಲವು ಬಂದೆದೆಯ ಮಿದಿದೇಳಿಸಲು,
ನೊಂದು ಮೈಮುರೆತು ಮಲಗಿದ ತಡಿಯನು
ಎಡೆಬಿಡದೆ ಹಲವು ತೆರೆದುಟಿಗಳಲಿ ಮುದ್ದಿಡುತ
ತಬ್ಬಿ ತಕ್ಕೈಸುವುದು, ದಿನ ರಾತ್ರಿಯು.

ಹಗಲಿರುಳೊಳವನಾಟನಿದ್ದೆಗಳೊಳಾ ಕಡಲ
ಕೂಗು ಕಿವಿಗವಿಗಳಲಿ ಮೊರೆಯುತಿರಲು
ಅದರ ಭಯಕರುಣರಸದಲಿ ನಾಂದ ಹೃದಯದಲಿ
ಬೆಳೆದನೆನಿತೋ ಮೂಕಭಾವಗಳನು.

ತಡಿಯಲ್ಲಿ ಸಾಲುಸಾಲಾಗಿ ನಿಂತಿದೆ ತೆಂಗು
ಬುವಿಯ ಹಸುರನು ಬಾನಿಗೊಸಗೆ ಹಿಡಿದು

ತಡಿಕಡಲುಗಳ ಪ್ರೇಮಜೀವನದ ಸಂಕೇತ
ಋವಿಬಾನುಗಳ ಹೃದಯಗೀತವೆನಲು.

ಮನೆನೆರೆಯೊಳಿವೆ ತೋಹುಗಳು ವಿವಿಧವೃಕ್ಷಗಳ
ಸ್ಥಿರಜೀವನಕೆ ಹಸುರುಗುಡಿಯನೆತ್ತಿ ;
ತಮ್ಮ ನಿಡುದೋಳುಗಳ ಚಾಚಿ ತಬ್ಬಿವೆ ಊರ
ದೇಗುಲವನವು ಶಾಂತಿಕೇಳಿಗಳಲಿ.

ಮೂಡುಗಡೆ ಸಾಲುಬೆಟ್ಟಗಳು ಕಂಗೊಳಿಸುತಿವೆ
ನಾಡಿದನು ಕಾವ ಬೆಸದದಟರಂತೆ,
ಕಾಡುಗಳ ಹಸುರುವಸನವ ತೊಟ್ಟು ಮುಗಿಲುಗಳ
ಮಣಿಕಿರೀಟವನಿಟ್ಟು ತಲೆಯಮೇಲೆ.

ಅಲ್ಲಲ್ಲಿ ತೊಳಲಿ ಬಳಲಿದ ಮುಗಿಲ ತುಣುಕುಗಳು
ಬೆಟ್ಟಗಳ ಸುವಿಶಾಲವಕ್ಷಗಳಲಿ
ಬಂದು ಮೊಗವಿಟ್ಟು ಮುದ್ದಿಟ್ಟು ಹರ್ಷಾಶ್ರುಗಳ
ಬಿಂದುಗಳನಲ್ಲಿ ಹೊನಲಾಗಿಸುವುವು.

ಆ ಬೆಟ್ಟಗಳ ಮುಡಿಗೆ ದಿನಕೊಮ್ಮೆ ದಿವ್ಯಪ್ರ
ಭಾವಲಯಮಾಲೆ ಬಂದಪುದು ರವಿಯು.
ತಮ್ಮ ಮೆಚ್ಚಿನ ತೊಡವನದನಳುಪದೀಯುವುವು
ಭೂವನಿತೆಗವು ಬಾನ-ಬೊಗಸೆಯಿಂದ.

ಆ ಬೆಟ್ಟಗಳ ಮೂಲದಿಂದ ವಾರಿಧಿವರೆಗೆ
ಸೋಪಾನರೂಪದಲಿ ಹೊರಳಿಬಂದು
ಋತುಋತುಗೆ ಕಾಲಕಾಲಕೆ ಬಣ್ಣಬಣ್ಣದಲಿ
ಕಂಗೊಳಿಸುತಿಹುದು ಕಳಕಳಿಸಿ ಹೊಲವು.

ವಿವಿಧವರ್ಣಗಳ ವಿಧವಿಧ ನಾದಭೇದಗಳ
ಸವಿಯ ಸೂರೆಯುಗುವ ತಿಳಿಬಗೆಗಳಿಂದ
ಹಳ್ಳಿಗರ ತೆರೆಬಗೆಗೆ ಹಾಡುಗಳನೂಡುವುವು
ಹೊಲಹೊಲಗಳಲಿ ತಳುವಿ ಪಕ್ಷಿವೃಂದ.

ಬಳಿಯೊಳೊಂದಿಹುದು ಕೆರೆ, ಹಳ್ಳಿಗರ ಬಾಳುವೆಗೆ
ಮೆಲುಪು ತಣುಪುಗಳನೊಸೆದೂಡುತಿಹುದು.
ಅಲ್ಲಿ ತಾವರೆ ಬೆಳಗುಹನಿಮಂಜುಗಳ ಕುಡಿದು
ನೇಸರಿನ ಕೈಗೆ ತುಟಿಹಚ್ಚುತಿಹುವು.

ತನ್ನ ತಿಳಿತನವನದು ಹಲವಾರು ಹಕ್ಕಿಗಳ
ಕೊರಲಿನಲಿ ಹಾಡಾಗಿ ಹರಿಸುತಿಹುದು.
ಹಲವು ತುರುಗಳ ತೇಲುದೋಣಿಗಳಿಗದು ದಡದ
ತೆಂಗುಗಳ ಹಾಯಿಗಳ ಬಿಡಿಸುತಿಹುದು.

ಈ ತೆರನ ಬಹುಭಂಗಿ ಕುಣಿತವುಣಿತಗಳವುರ
ರಮಣೀಯ ಶಾಂತಿಮಾತೆಯ ಮಡಿಲಲಿ
ಕೂಸಾಗಿ ಬೆಳೆದನಾ ಮಧುರ, ಸವಿಲಾಲಿಗಳ
ಸವಿದು ಭೂರಮೆಯ ಕೈದೊಟ್ಟಿಲಿನಲಿ.

ಕೆಳಗೆ ಕಡಲವನೆದೆಯನಾಳುವುದು ; ಬಾಂದಳವು
ತನ್ನ ನೂರಾರು ಕಣ್ಣುಗಳ ತೆರೆದು,
ಮೇಲುನಾಡಿನ ಹಲವು ಮೂಕಾನುಭವಗಳನು
ಕಳುಹುತಿಹುದವನೆದೆಗೆ ಪ್ರತಿರಾತ್ರಿಯು.

ಇಂತಿರಲು ಬಾಳುವೆಯುಷಃಕಾಲದಾ ಮುಗ್ಧ
ಶಾಂತಿಯುಳಿದೆಳಬಿಸಿಲ ಮೃದುಹಾಸದ
ಕಾಂತಿಯಲಿ ಬಂದುದು ಕಿಶೋರತೆಯು ಬಗೆಮುಗುಳು
ಸಂತಸದೊಳೆವೆಗಳನು ತೆರೆಯುತಿರಲು.

ಕವನಕಾಮಿನಿ ಅವನ ಕೊಳಲಾಗಿ ಮಾಡಿದಳು
ಸವಿಹಾಡುಗಳನೂದಿದಳು ದಿನದಿನ ;
ಅವಳ ಸಪ್ತಸ್ವರಕೆ ಸುಪ್ತಚೇತನವು ಹೆಡೆ
ಯೆತ್ತಿ ಕುಣಿದುದು ಮರೆತು ತನುವ ಮನವ.

ಇಂತಿರಲು ಬಂದಸಹಕಾರ ವಿಪ್ಲವದ ಧ್ವನಿ
ಅವನ ಬಗೆದೋಣಿಯನು ಬಡಿದು ಬಡಿದು
ದೇಶಭಕ್ತಿಯ ಸುಧೆಯನದರೊಳಗೆ ತುಂಬಿದುದು
ಅವನ ಮುಗ್ಧಾತ್ಮವನು ಮಿಡಿದು, ಮಿಡಿದು.

ಸಾಹಿತ್ಯ ಸಂಸ್ಕೃತಿಯ ಕಂಪುತಂಪುಗಳ ರಸ
ಗೇಹವವನಾತ್ಮವನು ಪಲ್ಲವಿಸಿರೆ,
ಮನದ ಹೊಲದೊಳುದಾತ್ತಭಾವಗಳ ಬೀಜಗಳ
ಚೆಲ್ಲಿದನು ಮೊದಲಿಂದ ಕೊನೆಯುವರೆಗೆ.

ಸತ್ಯದೆಡೆ ಕಣ್ಣು ತಿರುಗಿಸಬೇಕು ; ಶಾಶ್ವತದ
ಸುಧೆಯನುಂಡೆದೆ ತಣಿವು ಪಡೆಯಬೇಕು.
ಮರ್ತ್ಯಜೀವದ ತರುವೊಳಮರತೆಯ ಫಲ ತನಗೆ
ಸಿಕ್ಕಬೇಕೆಂದವನು ಭಾವಿಸಿದನು.

ಬಳಿಕ ತಿಳಿವನು ಪೂರ ಹೀರಬೇಕೆಂದೆಳಸಿ
ಹಲವು ತೊಡಕುಗಳ ಮಡುವುಗಳ ದಾಟಿ,
ನಗರವೊಂದನು ಸೇರಿದನು, ವಿದ್ಯೆಯನು ಪಡೆದು
ಬಗೆಯ ಕಸುಕನು ಹಣ್ಣುಗೊಳಿಸಲೆಳಸಿ.

೨

ಕಳೆದುದಾತನ ವಿಮಲಭಾವೋರ್ಮಿಗಳ ಬಾಲ್ಯ
ಹರಿವನಕ ಸುಖದಮೃತವಾಗಿ ಹರಿದು ;
ಬಿರುಗಾಳಿಗಳ ಬಸಿರ, ತೋರುಸೊಗಗಳ ಕುಸುರ,
ನವಭಾವಗಳ ವಿಸರ ಬಂತು ಹರೆಯ.

ಮುಗಿಲುಮಳೆಗಳಿಗೆಲ್ಲಿ ಭೇದ ? ಮುಗಿಲೇ ಕರಗಿ
ಮಳೆಯಾಗುವುದು ; ಮಳೆಯು ಗಾಳಿಯೊಡನೆ
ಸ್ಪರ್ಧಾಳುವಾದರದೆ ಮುಗಿಲಾಗಿ ಹಾರುವುದು ;
ಕನಸು ನನಸುಗಳಿಂತು ಬಾಲ್ಯದೊಳಗೆ !

ಒಂದೊಂದು ನಿಮಿಷಕೂ ಒಂದೊಂದು ರಸರೂಪ
ರಾಗದಿಂದೆಸೆವ ಸಂಧ್ಯಾಮೇಘದ
ಬಂಬಲಿನೆ ಹಲವು ಕನಸುಗಳು ಕುಣಿದಾಡಿದುವು
ಹಂಬಲಿನ ತುಂಬುಬೆಳೆಯೊಳು ಬಾಲ್ಯದ.

ಬಾಲಕನ ಹೃದಯರಾಜ್ಯದೊಳಸಾಧ್ಯತೆಗೊಂದು
ಕಾಲನಿಡಲೂ ಕೂಡ ಸಾಧ್ಯವಲ್ಲ.
ಕಡಲನೊಂದೇ ಬೊಗಸೆಯಲ್ಲಿ ಕುಡಿಯಲು ಬಹುದು;
ಮುಗಿಲ ಹೂವನು ತಂದು ಮುಡಿಯುಬಹುದು.

ಪದ್ಮದಳಗಳ ದೋಣಿಗಳ ಮಾಡಿ ಸಪ್ತ ಸಾ
ಗರದಾಚೆ ಬೀಸಾಗಿ ಸಾಗಬಹುದು.
ಹದ್ದುಗಳ ಹೆಗಲೇರಿ ಬಾನ ಮನೆಯನು ಸಾರಿ
ತಾರೆಗಳ ಕೂಡೆ ಕೆಳೆಬೆಳಸಬಹುದು.

ನೂರಾರು ರಾಜರನು ಹೂಂಕಾರಮಾತ್ರದಲಿ
ಗದ್ದುಗೆಯಿನೆಳೆದು ಕೆಳಕೆಡಹಬಹುದು;
ದಾರಿದ್ರ್ಯಭೂತವನಭೂತವೆನಿಸಲು ಬಹುದು;
ಧಾರಿಣಿಯನಂಬರಕ್ಕೆತ್ತಬಹುದು.

ಇಂಥ ಬಾಲ್ಯವು ಕಳೆದ ಬಳಿಕ ಬಂದಾ ಹರೆಯ
ದುಲ್ಕೆಯದು ಥಟ್ಟನೆ ಪಳಂಚಲೆದೆಗೆ
ಅಲೆಅಲೆಗಳೆದ್ದು ಬಗೆ ಕದಡಿಹೋದುದು ಶಾಂತ
ಸರದೊಳಾವುದೊ ಕಲ್ಲು ಬಿದ್ದ ಹಾಗೆ.

ಬಂದ ಹರೆಯದ ಕೂಡೆ ಕವಲಾಸೆಗಳು ಬಂದು
ಅವನ ಬಗೆರೆಕ್ಕೆಗಳ ಕಡಿದು, ಕಡಿದು,
ನೆಲದ ಹುಳುಗಳ ಕೂಡೆ ಹೊರಳಹಚ್ಚಿದುವಯ್ಯೊ,
ಕೊಳೆಬಗೆಗಳನು ಮನದಿ ತುಂಬಿ ಜಡಿದು.

ಆವುದೋ ಮಿಡುಕ ಮಿಡಿಮಿಡಿದು ಪಂಚೇಂದ್ರಿಯದ
ವೀಣೆಯೊಳು ಬಹುವಿಷಮನಾದಗಳನು
ಹುಚ್ಚುಹರಿಸಿತು, ಹಲವು ಕಾಲತಾಲಗಳಲ್ಲಿ ;
ಒಂದಕೊಂದಕೆ ತಾಳಮೇಳವಿಲ್ಲ.

ಒಂದು ಮಂದರವೊಂದು ತಾರ ಮಧ್ಯಮದೊಳಿ
ನ್ನೊಂದು ನಾನಾಗೀತ ಕಲಕಲದಲಿ
ಕಲಕಿ ಹೋಮದು ಜೀವ ; ಯಾವುದಕೆ ಶ್ರುತಿಗೊಡುವೆ
ನೆಂದು ಭ್ರಮಿಸಿತು ಭ್ರಮರರೂಪಿ ಚಿತ್ತ.

ಹಲವು ತಾನಗಳ ಸಂತಾನವಾದುದು ಮಧುರ
ನೊಳಬಾಳು ; ಹರೆಯದೊಡ್ಡೋಲಗದಲಿ
ತನಗೆಲ್ಲಿ ನೆಲೆ ? ಬಾಳ ಹಾಡಿಗೆಲ್ಲಿಹುದು ಬೆಲೆ ?
ಎಂದು ಮುರುಟಿದನು ತನುಮನಗಳಲ್ಲಿ.

ಸಂಜೆ ಚಿತ್ರಿಸಿದ ಹೊಂಗೆರೆಗಳನು ನುಂಗುತಿರೆ
ತಿಮಿರ, ಮೇಘಾಳಿಗೆಲ್ಲಿಹುದು ಚೆಲುವು ?
ಹಲವು ಹೊಂಗನಸುಗಳ ಬೊಕ್ಕಸವು ಬಾಲ್ಯವದು
ಕಳೆದ ಬಳಿಕೀ ಬಾಳು, ಹಾಳುಹಾಳು !

ಆದರ್ಶಸಾಧನೆಯ ಧ್ರುವತಾರೆಯೊಂದು ಬಾ
ನಂಗಳದಿ ನಿಂತು ಕೈಮಾಡುತಿಹುದು ;
ವಿಷಯಸುಖದಾಶೆ ಕಾರ್ಮುಗಿಲಾಗಿ ಹಗೆಯಾಗಿ
ದೃಷ್ಟಿಯನು ನೆಲದೆಡೆಗೆ ದೂಡುತಿಹುದು.

ಹಲವು ಚೆಲುವೆಯರ ವೈಸೊಬಗು ಸೆಳೆಮಿಂಚಿನೊಲು
ಅವನ ಬಗೆನೋಡವನಲಂಕರಿಸಿತು.
ಬಳಿಸಾರಲೆಂದೆಳಸಿ ಸಾರುವನಿತರೊಳಳಿದು
ಬಾಳ ಕಾರಿರುಳನದು ಪಲ್ಲವಿಸಿತು.

ಅವಳಿವಳ ಮೂರ್ತಿಯನು ಮನದಿ ಮೂಡಿಸುತದರ
ಧ್ಯಾನಧಾರಣೆಯೊಳೇ ದಿನಗಳೆದನು,
ನಿಡುಸುಯ್ಗಳಿಂದ ನಿಟ್ಟುಸಿರಿಂದ ಬಾಳುವೆಯ
ಹಸುರೆಲ್ಲವೂ ಸುಟ್ಟು ಸಿಡಿಯುತಿರಲು.

ಅವನು ಗೆಳೆತನಕೆ ಕಾತರಿಸಿದನು ; ಸರಿಹರೆಯ
ದೆಳೆಯರೊಳು ಸರಸಸಲ್ಲಾಪಕೆಳಸಿ,
ತಿಳಿನಗೆಯ ಹೊನಲನೇ ಹರಿಸಿ ತನ್ನೆದೆಯನದ
ರೊಳಗೆ ತೇಲಿಸಿ ಬಿಡುವೆನೆಂದು ಬಯಸಿ.

" ಗೆಳೆತನವೆ ! ಜೀವಜೀವದ ನಿತ್ಯನೂತನವೆ,
ಸಚರಾಚರದ ಮೂಲಚೇತನವೆ, ಬಾ !
ಭಾವಮಾರ್ದವದ ಸಂಜೀವನವೆ, ಜೀವನದ
ವಾಹಿನಿಯ ನಿತ್ಯಸಂಪೂರಣವೆ, ಬಾ ! "

ಎಂಬ ಮೃದುಗೀತಕೆದೆಯನು ಸಮುಶ್ರುತಿಗೊಳಿಸಿ
ನಿಂದು ನೋಡಿದನವನು ಕೆಲಕೆ ಬಲಕೆ—
ಒಂದಾಗಿ ಬಗೆಯೆರಡು ಮುಂದಾಗುವಾಸೆಯೊಳು
ಧಮನಿಧಮನಿಯು ತರಂಗಿತವಾಗಿರೆ.

ಕುಂದುಕೊರತೆಗಳುಂಟು ಜೀವಜೀವಗಳಲ್ಲಿ ;
ಒಂದಕೂ ಪೂರ್ಣತೆಯ ಪುಣ್ಯವಿಲ್ಲ.
ಪೂರ್ಣತೆಯ ದುರ್ದಮ್ಯವಾಂಛೆ ಬಿಡದೋಡಿಪುದು
ಸ್ನೇಹಭಿಕ್ಷೆಗೆ ಬಾಳ ಬೀದಿಗಳಲಿ.

ತೆರೆದ ಮನ, ಮುಗಿದ ಕೈ, ಬೆಂದು ಕೂಗುವ ಹೃದಯ ;
ಬರಿದಾದ ಬಾಳ ಪಾತ್ರೆಯನು ತೆರೆದು,
ಕೆಳೆಗಾಗಿ ಕಾತರಿಸಿ ತೊಳಲಿದನು ಹಲವುದಿನ ;
ಕಲಹ—ಕಪಟವೆ ಬಂತು ಹಲ್ಲುಮಸೆದು.

ತನ್ನ ಜೀವನದೊಳಗುಗಾಯುಗಳಿಗುಪ್ಪನಿಡು
ವನ್ನರಲ್ಲದೆ, ನಲ್ಮೆಸೂದೆಯನೆರೆದು,
ತಣ್ಪುಗೊಳಿಸುವ ಪ್ರೇಮನಿಧಿಗಳನು ಕಾಣದೆಯೆ
ಕೊರಗಿದನು ಮರುಗಿದನು ಹಗಲು—ಇರುಳು!

ಎಸಿತೆಸಿತೊ ಗ್ರಂಥಗಳನೋದಿ ರಸ ಹೀರಿದನು
ಹಲವು ಬೆಳಗುಗಳ ಬೆಳಕುಗಳ ಕುಡಿದ
ಮಲರಂತೆ, ಪ್ರೇಮಸತ್ಯದಯಾದಿ ಮೃದುಗುಣದ
ತಾಳುವೆಯ ಬಾಳನವಲಂಬಿಸಿದನು.

ತನ್ನ ಬಾಳಿನ ಮೂಲೆಮೂಲೆಯಿಂದಲು ಕುಂದು
ಕೊರತೆಗಳನೆಳೆದುತಂದನು ಬೆಳಕಿಗೆ.
ಅನ್ಯರೊಳು ಲೋಪದೋಷಗಳ ಬೆದಕಲು ಬೆದರಿ
ತನ್ನೆದೆಯನೇ ಗುಡಿಸಲನುವಾದನು.

ಮೃದುತೆ ಮಧುರತೆ ಬಂತು ಬಾಳುವೆಗೆ; ಕುಸುಮ ಕೋ-
ಮಲತೆ ಸಾರ್ದುದು ಮಧುರನಿಗೆ ಹೃದಯಕೆ.
ಆದರೇನಕಟಕಟ, ಸ್ಥಿರತೆ ಸಂಯಮಶಕ್ತಿ
ಬಾರದಾಯ್ತುವನ ರಸಜೀವವದಕೆ.

ಕರ್ತೃತ್ವಶಕ್ತಿ ಲೋಪಿಸಿತು; ಮತಿಗೂ ಕೃತಿಗು
ನೂರು ಯೋಜನಗಳಂತರವು ಬಂತು.
ಒಡಲು ಸಡಲಿತು ; ಮನವು ಮಸಣಿಸಿತು, ಜೀವನವು
ಸುಡುಗಾಡಿನೊಲು ಭೀಕರತೆಯನಾಂತು.

ದಾರ ತಪ್ಪಿದ ಗಾಳಿಪಟದಂತೆ, ಗಾಳಿಗಳ
ಹೊನಲಿಗೊಡ್ಡಿದ ಹಾರುತರಗಲಂತೆ,
ನೆಲಕೆ ಚೆಲ್ಲಿದ ಪಾದರಸದಂತೆ ಜೀವನವು
ವಿಚಲ ದುರ್ಬಲ ವಿಕಲವಾದುದವಗೆ.

ಅವನಾಣತಿಯನು ಕಡೆಗಾಣುತಿರೆ ಮನವು, ಮನ
ದಾಣತಿಗೆ ಕಿವುಡಾದುವಿಂದ್ರಿಯಗಳು.
ಇಂತರಾಜಕವಾಗಿ ಬಾಳುವೆಯು ನೂರಾರು
ವಿಪ್ಲವದ ಕಾಳ್ಕಿಚ್ಚಿಗೆಡೆಯಾದುದು.

ಹಲವಾಶೆಗಳ ಗೋರಿಗೋರಿಗಳ ಸಾಲಾಗಿ
ಹರೆಯವಾತನ ಕಣ್ಣನುರಿಸುತಿರಲು,
ಇಂದುಮುಂದಿಗೆ ಹೇಸಿ ಹಿಂದಿನಿರವಿನ ನೆನಹು
ನಾಡಿನೊಳು ಚಿರಪಥಿಕನಾದನವನು.

ಆಗಾಗ ಮೇಲ್ನಾಡಿನಾಶೆ ಮೃಗತೃಷ್ಣೆಯೊಲು
ಬಂದು ಬಂದಳಲನುಗ್ಗಡಿಸುತಿರಲು,
ಶಾಂತಿರಾಜ್ಯದ ಬಹಿಷ್ಕೃತನಾಗರಿಕನಂತೆ
ಚಿಂತೆಗಳ ಹಳುವದಲಿ ಹೊಲಬಳಿದನು.

ಇಂತು ಸಂಕ್ಷುಬ್ಧಸಾಗರದುಗ್ರ ಜೀವನದ
ಸಂತಾಪವನದೆಂತೊ ಧರಿಸಿ ಭರಿಸಿ,
ಕೊನೆಗೊಮ್ಮೆ ಹುಟ್ಟೂರ ನೋಡುವಾಸೆಯು ಕೆರಳಿ
ತೆರಳಿದನು ಪಡುಗಡಲ ತಡಿಯನರಸಿ!

೩

ಅದೆ ಕಡಲು ಮುಗಿಲವೇ ಕೆರೆತೊರೆಗಳದೆ ಬಾನು
ಹೂಬಳ್ಳಿಗಿಡಮರಗಳಂದಿನವೆ, ಹಾ!
ಅವುಗಳೇ ಹಕ್ಕಿಗಳು ಮನವನಿಂದೇಕೆ ಸಂ
ತವಿಸವೆಂದಳಲುವನು ಕೂಗಿ ಕರೆದು.

‘ನಾವು ಪಡೆವುದು ನಾವು ಕೊಡುವನಿತನೇ, ನಮ್ಮ
ಜೀವನದೊಳೇ ಬಾಳುತಿಹುದು ಪ್ರಕೃತಿ.’
ಎಂದು ಕವಿ ಕೋಲರಿಜನುಸುರಿದಾ ಸವಿನುಡಿಯೆ
ಬಂದು ಮೊರೆಯುವುದವನ ಕರ್ಣಗಳಲಿ.

ಕೆರೆಯ ದಡದಲಿ ಹಸುರುಹುಲ್ಲುಗಳ ಹಾಸಿನಲಿ,
ಅರೆಯೊರಗಿ ಕಣ್ಮಲರು ಅರೆತೆರೆದಿರೆ,
ಮೊರೆವ ಮಧುಪಗಳ ಗುಂಜಾರವವ ಕೇಳಿ ಮಾ
ಮರದ ಮಂಜರಿಗಳೆಡೆ ನೋಡುತಿಹನು.

ದೂರದ ದಿಗಂತದೆಡೆ ಹರಿಸುವನು ದಿಟ್ಟಿಯನು;
ದಾರಿ ನೋಡುವನದಾರನೊ ತಿಳಿಯನು.
ತರಗೆಲೆಯ ಮರ್ಮರಕೆ ಬೆಚ್ಚಿ ಬೆದರೇಳುವನು ;
ಆರ ದನಿಯನೊ ಕೇಳಿ ಕೆರಳಿದಂತೆ !

ಬಳಿಯ ಕೆರೆಯೊಳಗೆರಡೆ ಬೊಗಸೆ ನೀರುಳಿದಿಹುದು
ಆರದಾಸರ ಗ್ರೀಷ್ಮ ಕುಡಿದು ಕುಡಿದು.
ಅದರಂತೆ ತನ್ನೆದೆಯ ಹಿರಿಯಾಸೆಗಳ ಕಡಲು
ಒಂದೆರಡೆ ಹನಿಯಾದುದೆಂದರಿವನು.

ಸಂದ ಬಾಲ್ಯದ ಹಲವುಮೊಗದ ವಿಮಲಾದರ್ಶ
ಬಂದ ಮಾವಿನ ಹಲವು ಹೂಗಳಂತೆ
ಇಂದು ಕಣ್ಮರೆಯಾದುದಯ್ಯೊ, ಹರೆಯದ ಗ್ರೀಷ್ಮ
ಕೊಂದುತಿಂದುದು ಬಾಳ ಹಸುರನೆಲ್ಲ.

ಮನ ಸಿಡಿದು ಹೋಳಾಗುತಿಹುದಿಂದು ; ತನು ವಿಕಾ
ರಗಳ ಮಡುವಿನೊಳಿದೋ ಬೀಳುತಿಹುದು.
ಕಾರ್ಮುಗಿಲ ದಾಳಿಗೊಳಗಾದ ಬಾನೆದೆಯಂತೆ
ಬಗೆಯು ಬಿರುಗಾಳಿಗಳ ಬೀಡಾಯಿತು.

ತೊರೆಯ ತಿಳಿನೀರ ಕುಡಿದಲ್ಲಲ್ಲಿ ಗಿಡದಡಿಯ
ಹಸುರುಹಸಲೆಯ ಮೇದು ಮೋದಗೊಂಡ
ಚಿಗರೆಯೇಕಿಂದು ಮಿಡುಮಿಡುಕುತಿಹುದಯ್ಯ, ಮೃಗ-
ಯಾವಿಹಾರಕೆ ಬಂದ ಕಟುಕನಾರು ?

ನೂರಾರು ಚಿಂತೆಗಳ ಚಿತೆಯೊಳಿದೆಯುರಿಯುತಿದೆ ;
ಕಂಡುಕೇಳದ ಜನರ ನೆನಹು ಬಂದು,
ಕದವು ಕಂಬನಿಗಳಿಗೆ ಹೊನಲಾದುದಾತನಿಗೆ
ಹೇಳಲಾರದ ದುಃಖ ಮೀರಿಬಂದು.

ಬಳಿಯ ಹಕ್ಕಿಗಳ ಚಿಲಿಪಿಲಿಯಿಂದೆ ಕಣ್ದೆರೆದು
ಸುಳಿವ ಹಸುಗಳ ದನಿಗೆ ಮರವೆ ತಿಳಿದು
ಮೊಗವೆತ್ತಿ ನೋಡಿದನು,—ಪಡುಗಡೆಗೆ ಕೆನ್ನೀರ
ಹೊಳೆಯ ನಾವೆಗಳಂತೆ ಮುಗಿಲುಗಳನು.

ಮೊದಲ ಬೇಟಕೆ ಕದಪು ಕೆಂಪೇರ್ದ ಕನ್ನಿಕೆಯ
ಸಿರಿಮೊಗದ ಕೆಂಬರಳ ನತ್ತಿನಂತೆ
ಸೊಗಸಿದನು ರವಿ ಪಡುವಲಲಿ ; ಕಡಲ ತೋಳ್ಗಳಲಿ
ಜಗದ ಜೀವದ ರತ್ನ ಕಳಚುವಂತೆ.

ಬಾನಗಲಕೂ ಯಾವ ಕಲೆಗಾರ ಕುಂಚದಲಿ
ನಾನಾವಿಧದ ವರ್ಣರೂಪಗಳಲಿ
ಅಮರಕಲ್ಪನೆಯ ಕುಡಿಗಳನಿಲ್ಲಿ ಮೊಳೆಸುವನು,
ಯಾವ ಬೆಸಕೆಂದವನು ನಿಡುಸುಯ್ವನು.

ಇಲ್ಲಿ ಜಗವಲ್ಲಿ ಮುಗಿಲಿವುಗಳಂತರದೊಳಗೆ
ಯಾವ ಶಾಂತಿಗೊ ಮಹಾಪೂರ ಬಂತು.
ಉಸಿರ ಬಿಗಿಹಿಡಿದು ಕದ್ದೈತರುತಲಿದೆ ಗಾಳಿ ;
ಮಿಸುಕಾಡದಿಹುವು ತರುತೃಣಲತೆಗಳು.

ಮುಳುಗುವನು ರವಿ. ಬರಿದೆ ಮುಳುಗುವನೆ ? ದಿನದಿನದ
ತನ್ನ ಕರ್ತವ್ಯಕರ್ಮದ ನೋಂಪಿಗೆ
ಸಲಿಸಿದನು ಕುಂದು ಬರದಂತೆ ದಿನದಾಯುವನು ;
ಬಳಿಕಿಳಿದನವನಪರವಾರಿನಿಧಿಗೆ.

ಒಕ್ಕೊರಲಿನಲಿ ಹಲವು ಹಕ್ಕಿಗಳು ಬಿಕ್ಕುತಿವೆ;
ರವಿಯ ಚರಮಶ್ಲೋಕ ಬಿತ್ತರಿಸಿದೆ;
ಬಾನಗಲ ನೆಲದಗಲ ಮರಗಿಡವು ಹೂ ಬಳ್ಳಿ
ಮೌನದಿಂದದಕೆ ದನಿಗೂಡಿಸುತಿವೆ.

'ಎಲೆಲೆ ಮುಗಿಲುಗಳೆ! ಹುಟ್ಟಿಲ್ಲಿ? ಹೊರಟಿಹುದೆಲ್ಲಿ?
ಎಲ್ಲಿಂದಲೆಲ್ಲಿಗೇರಿದಿರಿ, ನೀವು?
ಬಣ್ಣ ಬಣ್ಣದ ಉಡಿಗೆ ತೊಡಿಗೆ ಸಿಂಗರವಾಯ್ತು;
ಬಾನೆಲ್ಲವೂ ನೃತ್ಯರಂಗ ನಿಮಗೆ.

'ತಾರೆಗಳೆ ನಿಮ್ಮೊಲವಿನೊಡತಿಯರು ದಿಗ್ದಂತಿ-
ದಂತಗಳೆ ಕಹಳೆ ಕೊಂಬುಗಳು ನಿಮಗೆ;
ಯಾವ ಚಿರನೂತನದ ಓಲೆಕಾರರು ನೀವು?
ಯಾವ ನನ್ನಿಯ ನೆಲೆಯ ಹರಿಕಾರರೋ!

'ಅದಲು ಬದಲಿನ ತೆರಗಳಿಂದೆ ಕದಡಿದೆ ನಿಮ್ಮ
ಬಾಳುವೆಯ ಮೇಲುಮೈ—ಆದೊಡೇನು?
ಒಳಗಿಳಿದು ನೋಡಿದರೆ ಗಂಭೀರ, ಗಂಭೀರ;
ಹಲವು ಮುತ್ತನು ತಳೆದ ತಳ ನಿಮ್ಮದು.

'ನೆಲದಣುಗರೊಡಲುರಿಯ ತಣಿಪೊಂದು ಹೆಗ್ಗುರಿಯು
ಅದೆ ನಿಮ್ಮ ಜೀವನದ ಮೊಳಕೆ—ಬೆಳಸು.
ಅದಕಾಗಿ ತೊಳಲುವಿರಿ; ನೋನುವಿರಿ; ಮಳೆಯಾಗಿ
ಸುರಿಸುರಿದು ಕೃತಿಯಾಗಿ ಬಾಳುತಿಹಿರಿ!

'ನಿಮ್ಮಂತೆ, ತೋರಿಕೆಗೆ ಚಲವಿಚಲವೆನಿಸಿದರು,
ಒಳಬಾಳೊಳುತ್ತಮಾದರ್ಶವೊಂದು
ಅಚ್ಚೊರಿದು ವಜ್ರಲೇಪಿತವಾಗಿ ಬಾಳುವೆಯ
ಸೂತ್ರವನು ಹಿಡಿದು ಕುಣಿಕುಣಿಸಬೇಕು.

‘ ದಿಟವು ದಿಟವಿದು ತಂದೆ ! ಆದರಾನಾವೊಂದು
ದಾರಿಯನು ಹಿಡಿವೆನೆಂದರಿಯೆನಲ್ಲ.
ಹಿಡಿದ ದಾರಿಗೆ ಕವಲು ಕವಲು ಪದಪದಗತಿಗೆ,
ನಡೆವ ತ್ರಾಣವು ಜೀವಕಿಲ್ಲವಲ್ಲ !

‘ ತನುಮನಗಳೆರಡು ತಟ್ಟೆಗಳ ತಕ್ಕಡಿ ಬಾಳು
ಅದನು ಸಮಸೂತ್ರದಲಿ ನಿಲಿಸಲಾರೆ !
ತನುಭಾರ, ಭಾರ ; ಮನ ಗಾಳಿಗೂ ಬಲುಹಗುರ ;
ನಿತ್ಯಸಂಬಂಧವಿವಕೇತಕಕಟ !’

ಎಂದು ಮೇಲ್ನೋಡಿದನು ಲಕ್ಷೋಪಲಕ್ಷ ನ
ಕ್ಷತ್ರಗಳ ನಿರ್ನಿಮೇಷಾಕ್ಷಿಗಳಲಿ
ಸ್ಫುರಿಪ ಕಲ್ಪನೆಯೊಂದು ಅವನೆದೆಯ ಮುದ್ರಿಸಿತು
ಜಗಮುಗಿಲುಗಳ ವಿಮಲಸಾಕ್ಷಿಗಳಲಿ !

ಹಲವು ಯುಗಯುಗದಿಂದ ಮನುಜರೆದೆಬನದಲ್ಲಿ
ಅರಳಿ ಬಾಡಿದ ಭಾವಕುಸುಮವೆನಿತೋ
ನೆಲದ ಹಗೆ ತಾಳಲಾರದೆ ಮುಗಿಲನೇರಿಹುವು ;
ಅಲ್ಲಿ ತಾರೆಗಳಾಗಿ ಮಿನುಗುತಿಹುವು.

ಮಿನುಮಿನುಗಿ ಕಾರಿರುಳೊಳಲೆವ ಅಕೃತಾರ್ಥರೆದೆ
ಯಾಳದಲಿ ಕಿರುಬೆಳಕ ಕುದುರಿಸುವುವು.
ತನುಮನದ ಈ ವಿಕಟನಾಟ್ಯದೊಳಗೂ ಬಾಳಿ
ನಾಸೆಯುಳಿಕಿಡಿಗಳನು ಕನಲಿಸುವುವು.

‘ ತುಂಬು ತುಂಬದರಿಂದ ಬಾಳಿನಲಿ ಮೊದಲಿಂದ
ಕೊನೆಯವರೆಗೂ ದಿವ್ಯಭಾವಗಳನು.
ಎಂದಾದರೊಂದುದಿನ ನಿನ್ನ ಮಲ ಭಾವಗಳೆ
ಬಾಂದಳದ ಹೂವಾಗಿ ಮಲರಲಿಹುವು !’

---

ಶ್ರೀಮಾನ್ ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರ ರಜತೋತ್ಸವ ಸುವರ್ಣ ಪದಕವನ್ನು ೧೯೪೧ ನೆಯ ಇಸವಿಯಲ್ಲಿ ಪಡೆದ ಕವಿತೆಯಿದು.